


ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವಾರಿ ಸೇವೆ

## ಭಕ್ತರಿಗೆ ಸ್ವಚ್ಛಂದ ಸೇವಾವಕಾಶ



ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ಪವಿತ್ರವಾದ ತಿರುಮಲೆಗೆ ವರ್ಷಂಪ್ರತಿ ಲಕ್ಷಾಂತರ ಮಂದಿ ಭಕ್ತರು ಬಂದು ಹೋಗುತ್ತಾರೆ. ದೇಶದ ನಾನಾ ಭಾಗಗಳಿಂದ ಬರುವ ಈ ಯಾತ್ರಿಕರ ಸೇವೆಯಲ್ಲಿ ಮತ್ತೂ ಹೆಚ್ಚಿನ ಅನುಕೂಲಗಳನ್ನುಂಟುಮಾಡಲೆಂದು ತಿರುಮಲ ತಿರುಪತಿ ದೇವಸ್ಥಾನಗಳು "ಶ್ರೀವಾರಿ ಸೇವೆ"ಯನ್ನು ಆರಂಭಿಸಿದೆ.

ಸೇವಾ ಮನೋಭಾವವನ್ನು ಹೆಚ್ಚಿಸಿ, ಸೌಹಾರ್ದತೆಯನ್ನು ಬೆಳೆಸಿ ಭಕ್ತಿಭಾವವನ್ನು ಸರ್ವತ್ರ ಹರಡುವಂತಹ ಒಂದು ವಿಶಿಷ್ಟವಾದ ಅವಕಾಶವನ್ನು ಈ ಸೇವೆಯು ಒದಗಿಸುತ್ತದೆ. ಶ್ರುತಿ ಸ್ಮೃತಿಗಳು ಹೇಳುವಂತೆ ಗರ್ಭಗೃಹದಲ್ಲಿರುವ ಸ್ವಾಮಿಯನ್ನು ಆರಾಧಿಸುವುದರ ಮೂಲಕವಾಗಿ ಮಾತ್ರವೇ ಅಲ್ಲದೆ, ಆತನ ಭಕ್ತರ ಸೇವೆಯನ್ನು ಮಾಡುವುದರಿಂದಲೂ ದೈವಾನುಗ್ರಹವನ್ನು ಪಡೆಯಬಹುದು. ಹೀಗಾಗಿ "ಶ್ರೀವಾರಿ ಸೇವೆ"ಯು ಸ್ವಾಮಿಯ ಭಕ್ತರನ್ನು ನಿಸ್ವಾರ್ಥದಿಂದ ಸೇವಿಸುವುದರ ಮೂಲಕ ಶ್ರೀನಿವಾಸ ದೇವರ ಸೇವೆ ಮಾಡಿ ಅಧಿಕ ಫಲ ಪಡೆಯುವಂತೆ ಮಾಡುವುದು.

ಭಕ್ತರು ತಮ್ಮ ಸ್ವಯಂಸೇವೆಯನ್ನು ಕೆಳಕಂಡ ಕ್ಷೇತ್ರಗಳಲ್ಲಿ ಮಾಡಬಹುದಾಗಿದೆ-

1. ಅನ್ನದಾನ ಯೋಜನೆ, 2. ಸರತಿಯ ಸಾಲು, 3. ಕಲ್ಯಾಣಕಟ್ಟೆ, 4. ಕಾಲುಹಾದಿಯ ಯಾತ್ರಿಕರಿಗೆ ನೆರವು ನೀಡುವಿಕೆ, 5. ಸಾಮಾನುಗಳನ್ನು ಭದ್ರಗೊಳಿಸುವ ಕೋಣೆ, 6. ವಾಹನ ನಿಲ್ದಾಣ, 7. ಉಚಿತ ವಸ್ತುಸಾಗಣೆ ಕೇಂದ್ರ, 8. ಸ್ವಾಮಿ ಪುಷ್ಕರಿಣಿ 9. ಸಮಾಚಾರ ಕೇಂದ್ರ, 10. ಶ್ರೀವಾರಿ ಆಲಯ.

ಯಾತ್ರಿಕರು ತಮ್ಮ ಅಪೇಕ್ಷೆ, ಆಸಕ್ತಿಗಳಿಗೆ ತಕ್ಕಂತೆ ಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು. ಅನ್ನದಾನಂ ಭವನದಲ್ಲಿ ಕೆಲಸ ಮಾಡುತ್ತಿರುವ ಕೌಂಟರಿನಲ್ಲಿ ತಮ್ಮ ಹೆಸರನ್ನು ಕೂಡಲೇ ನೊಂದಾವಣೆ ಮಾಡಿಕೊಳ್ಳಬಹುದು. ಹತ್ತು ಮಂದಿಗೆ ಕಡಿಮೆಯಿಲ್ಲದಂತೆ ಒಂದು ಗುಂಪಿನಲ್ಲಿ ಒಂದು ವಾರಕ್ಕೆ ಕಡಿಮೆಯಾಗದಂತೆ ಸೇವೆ ಸಲ್ಲಿಸಬಯಸುವವರು ಮೊದಲೇ ತಿಳಿಸಿ ಸೇವೆಯಲ್ಲಿ ಭಾಗವಹಿಸಬಹುದು. ಇವರಿಗೆ ಉಚಿತ ವಸತಿ ಹಾಗೂ ಭೋಜನ ಸೌಕರ್ಯವನ್ನು ತಿರುಮಲೆಯಲ್ಲಿ ಒದಗಿಸಲಾಗುವುದು. ಭಜನ ಸಂಘಗಳೂ ಸ್ಫೂರ್ತಿದಾಯಕವಾದ ಈ ಸೇವೆಯಲ್ಲಿ ಭಾಗವಹಿಸಬಹುದು.

"ಶ್ರೀವಾರಿಸೇವೆ"ಯಲ್ಲಿ ಪಾಲು ಹಂಚಿಕೊಳ್ಳಬಯಸುವ ಯಾತ್ರಿಕ ಭಕ್ತರು ತಿರುಮಲೆಯ ಅನ್ನದಾನಂ ಸಮುದಾಯ ಭವನದಲ್ಲಿರುವ ಶ್ರೀವಾರಿ ಸೇವೆ ವಿಭಾಗದಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಬೇಕೆಂದು ಕೋರಲಾಗಿದೆ.

ಹೆಚ್ಚಿನ ವಿವರಗಳಿಗೆ : ಶ್ರೀವಾರಿಸೇವೆ ವಿಭಾಗ ಅನ್ನದಾನಂ ಕಾಂಪ್ಲೆಕ್ಸ್ - ತಿರುಮಲ, **ದೂರವಾಣಿ - 08574 - 79693.**

**ಪೌರಸಂಬಂಧಾಧಿಕಾರಿಗಳು**, ತಿ. ತಿ. ದೇವಸ್ಥಾನಗಳು - ತಿರುಪತಿ. **ದೂರವಾಣಿ - 08574 - 32813.**

**ಕಾರ್ಯನಿರ್ವಹಣಾಧಿಕಾರಿ.**






ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀ ವರ ವೆಂಕಟೇಶ

ನಾಲಿಗೆಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ
ವಿಶಾಲಕರ್ಣಕೆ ಭೂಷಣ ವಿಷ್ಣುಕಥೆಯು ॥ 1 ॥



ದಾನವೆ ಭೂಷಣ ಇರುವ ಹಸ್ತಗಳಿಗೆ
ಮಾನವೆ ಭೂಷಣ ಮಾನವರಿಗೆ
ಜ್ಞಾನ ಭೂಷಣ ಮುನಿಯೋಗಿ ವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು ॥ 2 ॥



ರಂಗನನು ನೋಡುವುದೆ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರಭೂಷಣ
ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮ ನಾಮ ಅತಿ ಭೂಷಣ ॥ 3 ॥

- ಶ್ರೀಪಾದರಾಜರು.

# ಸಪ್ತಗಿರಿ

## ಓದುಗರಲ್ಲಿ, ಏಜಂಟರಲ್ಲಿ ವಿನಂತಿ.

ಮೂವತ್ತೆರಡನೆಯ ವರ್ಷದಲ್ಲಿ ಕಾಲಿಟ್ಟು ನಡೆಯುತ್ತಿರುವ ಸಪ್ತಗಿರಿ ಮಾಸ ಪತ್ರಿಕೆಯ ಮುದ್ರಣ ವೆಚ್ಚಗಳ, ಕಾಗದ ಇಂಕುಗಳ ಬೆಲೆಯ, ಹೆಚ್ಚಳದಿಂದಾಗಿ ಪತ್ರಿಕೆಯ ಬೆಲೆಯನ್ನು ಒಂದು ರೂಪಾಯಿ ಹೆಚ್ಚು ಮಾಡಲಾಗಿದೆ. 2001 ರ ಸೆಪ್ಟಂಬರ್ ಸಂಚಿಕೆಯಿಂದ ಈ ಪರಿಷ್ಕೃತ ದರ ಜಾರಿಗೆ ಬರಲಿದೆ.

ಏಜಂಟರು ತಮ್ಮ ಅಗತ್ಯಕ್ಕೆ ತಕ್ಕಂತೆ ಠೇವಣಿಯನ್ನು ಹೆಚ್ಚಿಸಬೇಕಾಗಿದೆ. ಈ ಠೇವಣಿ ಏರಿಕೆಯನ್ನು ಕೂಡಲೇ ಕೈಗೊಂಡು ಸಪ್ತಗಿರಿ ಪತ್ರಿಕೆಯ ಬೇಡಿಕೆ - ನೀಡಿಕೆ - ಯನ್ನು ಕಾಯ್ದುಕೊಳ್ಳಬೇಕು ಎಂದು ವಿನಂತಿಸಲಾಗಿದೆ.

ಈಗಾಗಲೇ ಚಂದಾದಾರರಾಗಿರುವವರಿಗೆ ಅವರ ಚಂದಾ ಅವಧಿ ಮುಗಿಯುವವರೆಗೆ ಹಳೆಯ ದರಗಳನ್ನೇ ಅನ್ವಯಿಸಲಾಗುವುದಾದರೂ, ಸೆಪ್ಟಂಬರ್ 2001 ರಿಂದ ಉಂಟಾಗತಕ್ಕ ಹೊಸಚಂದಾ ಆಗಲೀ, ಹಳೆಯ ಚಂದಾದಾರರ ಮುಂದುವರಿಕೆಯಾಗಲೀ - ಹೊಸ ದರಗಳಲ್ಲಿ ಆಗಬೇಕು. ಆದ್ದರಿಂದ ಚಂದಾ ಮುಂದುವರಿಕೆಗೆ ಅಥವಾ ಹೊಸದಾಗಿ ಚಂದಾದಾರರಾಗಬಯಸುವವರು ವಾರ್ಷಿಕ ಚಂದಾ ಹಣ ರೂ. 60/- ಗಳನ್ನು (ಅರವತ್ತು ರೂಪಾಯಿ ಮಾತ್ರ) ಕಳುಹಿಸಬೇಕೆಂದು ವಿನಂತಿಸಲಾಗಿದೆ.

ಹೊಸದಾಗಿ ಪ್ರವೇಶಗೊಳಿಸಲಾಗಿರುವ ಆಜೀವ ಚಂದಾ ದರವನ್ನು ರೂ. 500/- ಕ್ಕೆ (ಐದು ನೂರು ರೂಪಾಯಿಗಳು ಮಾತ್ರ) ನಿಗಧಿ ಗೊಳಿಸಲಾಗಿದೆ. ಹೆಚ್ಚು ಮಂದಿ ಆ ಜೀವ ಚಂದಾದಾರರಾಗಿ ಸಪ್ತಗಿರಿಯ ಲಾಭ ಪಡೆಯಬೇಕೆಂದು ಆಶಿಸಲಾಗಿದೆ.

**ಸೆಪ್ಟಂಬರ್ 2001 ಸಂಚಿಕೆಯಿಂದ**

★ ಬಿಡಿ ಪ್ರತಿ **ರೂ. 5/-**

★ ವಾರ್ಷಿಕ ಚಂದಾ **ರೂ. 60/-**

★ ಆಜೀವ ಚಂದಾ **ರೂ. 500/-**

ತಮ್ಮ ಚಂದಾ ಹಣದ ಎಂ.ಓ., ಡಿ.ಡಿ. ಕಳುಹಿಸಬೇಕಾದ ವಿಳಾಸ,

**- ಸಂಪಾದಕರು,** ಸಪ್ತಗಿರಿ, ತಿ.ತಿ.ದೇ. ಪ್ರೆಸ್ ಕಾಂಪೌಂಡ್, ತಿರುಪತಿ - 517 507.




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ - 32 ಆಗಸ್ಟ್ 2001 ಸಂಚಿಕೆ - 3

# ವಿಷಯಸೂಚಿ



ಮುಖಚಿತ್ರ : *ಶ್ರೀ ವೈಖಾನಸ ಮಹರ್ಷಿ - ವಿಗ್ರಹ - ಕೃಪೆ - ವೈಖಾನಸ ಆಶ್ರಮ, ತಿರುಮಲೆ.*
ಹಿಂಬದಿಯಲ್ಲಿ : *ಶ್ರೀ ಗಾಯತ್ರಿ - ಚಿತ್ರ - ಜಿ. ಚಂದ್ರಶೇಖರ್.*

ಗೌರವ ಸಂಪಾದಕರು :
**ಡಾ॥ ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ॥ ಎನ್.ಎಸ್. ರಾಮಮೂರ್ತಿ,**

ಮುದ್ರಣ :
**ಐ. ಪಾರ್ವತೀಶ್ವರ ರಾವ್,**
ಬಿ.ಎ.,ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್,** ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ
ಪ್ರತಿಗಳೂ
ಎಲ್ಲ ತಿ.ತಿ.ದೇ.
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ॥

# ನಿಮ್ಮೊಡನೆ ಎರಡು ಮಾತು......



ಸಪ್ತಗಿರಿ ಪತ್ರಿಕೆ ಮೂವತ್ತೆರಡನೆಯ ವರ್ಷದಲ್ಲಿ ನಡೆಯುತ್ತಿದೆ. 1970 ರಲ್ಲಿ ಆರಂಭವಾದ ಸಚಿತ್ರ ಮಾಸಪತ್ರಿಕೆಯ ಮೂಲ ಬಂಡವಾಳ ಶ್ರೀ ವೆಂಕಟೇಶ್ವರಸ್ವಾಮಿಯ ಕೃಪೆ. ಅದರ ರಕ್ಷಾವಲಯದಲ್ಲಿ ಸಾವಿರಾರು ಮಂದಿ ಪಾಠಕ ಮಹಾಶಯರು, ನೂರಾರು ಮಂದಿ ಏಜಂಟರು ಬರುತ್ತಾರೆ. ಕಾಲದಿಂದಲೂ ಸಪ್ತಗಿರಿಯನ್ನು ಸ್ವಾಗತಿಸಿ ಆಗರಿಸಿ ಅದರ ಪ್ರಾಚುರ್ಯಕ್ಕೆ ಪ್ರೋತ್ಸಾಹ ನೀಡುತ್ತ ಬಂದಿದ್ದಾರೆ.

1949 ರಲ್ಲಿ ತಿ. ತಿ. ದೇವಸ್ಥಾನಗಳ ಬುಲೆಟಿನ್ ಆಗಿ ಆರಂಭವಾದ ಈ ಸಪ್ತಗಿರಿ ಸರಿತೆ 1975 ರಲ್ಲಿ ಇಂದಿನ ಆಕಾರವನ್ನು ಪಡೆಯಿತು. ಅಂದಿನಿಂದಲೂ ಏಕಪ್ರಕಾರವಾಗಿ ಭಕ್ತರ ಆಧ್ಯಾತ್ಮಿಕ ದಾಹಕ್ಕೆ ನೀರೆರೆಯುವ ಪ್ರಯತ್ನದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ತಿರುಮಲೆಯ ಯಾತ್ರಿಕರ ಕರದೀಪಿಕೆಯಾಗಿ,ಪರಿಚಾರಿಕೆಯಾಗಿ ಕೆಲಸ ಮಾಡುವ ಯತ್ನದಲ್ಲಿ ಸಾಕಷ್ಟು ಸಾಫಲ್ಯವನ್ನು ಕಂಡಿದೆ. ಆದರೂ ತಿರುಮಲೆಯ ಯಾತ್ರಿಕರಿಗೆಲ್ಲ ಇದನ್ನು ತಲುಪಿಸುವ ಉದ್ದೇಶ ಇನ್ನೂ ಪೂರ್ಣವಾಗಿಲ್ಲ. ಆ ದಿಸೆಯಲ್ಲಿ ದಾಪುಗಾಲು ಹಾಕುತ್ತ ಗುರಿಯನ್ನು ತಲುಪುವ ಪ್ರಯತ್ನ ನಡೆದಿದೆ.

ಈ ಹಿಂದಿನ ಅರ್ಧ ಶತಮಾನದಲ್ಲಿ ಅನೇಕ ಪರಿವರ್ತನೆಗಳುಂಟಾಗಿವೆ. ಪತ್ರಿಕಾರಂಗದಲ್ಲಿ ಬಹುಬಾರಿ ಬೆಲೆಗಳು ಪರಿಷ್ಕೃತವಾಗುವಂತೆ ಇತರ ವೆಚ್ಚಗಳು ಬೆಳೆದಿವೆ. ಮುಖ್ಯವಾಗಿ ಕಳೆದ ಕಾಲು ಶತಮಾನದಲ್ಲಿ ಕಾಗದ, ಮುದ್ರಣ ವೆಚ್ಚಗಳ, ಬೆಲೆಗಳು ಬೇಗ ಬೇಗ ಏರಿವೆಯಾದರೂ, ಸುತ್ತಮುತ್ತಲಿನ ಎಲ್ಲ ಪತ್ರಿಕೆಗಳ ಬೆಲೆಗಳೂ ಏರುತ್ತಿರುವಂತಹ ಪ್ರಮಾಣದಲ್ಲಿ ಗಾತ್ರದಲ್ಲಿ ಸಪ್ತಗಿರಿಯ ಬೆಲೆಯನ್ನು ಏರಿಸಿಲ್ಲ. ಐವತ್ತು ಪೈಸೆಯಿಂದ ಒಂದು ರೂಪಾಯಿ, ಒಂದರಿಂದ ಎರಡು, ಎರಡರಿಂದ ನಾಲ್ಕು --ಇಲ್ಲಿಗೇ ಸೀಮಿತವಾಗಿದ್ದಿತು. ಈಗ ಸೆಪ್ಟಂಬರ್ 2001 ರಿಂದ ಅನಿವಾರ್ಯವಾಗಿ ಐದು ರೂಪಾಯಿಗಳಿಗೆ ಏರಿಸಲಾಗುತ್ತಿದೆ. ಈ ಒಂದು ರೂಪಾಯಿನ ಹೆಚ್ಚಳ ಪಾಠಕರಿಗೆ ಕೊಂಡು ಓದುವ ಭಕ್ತರಿಗೆ, ಅವರಿಗೆ ವಿತರಿಸುವ ಏಜಂಟರಿಗೆ ಹೆಚ್ಚಿನ ಹೊರೆಯಾಗಲಾರದು ಎಂದು ಭಾವಿಸಲಾಗಿದೆ. ಅವರೆಲ್ಲರ ಪ್ರೋತ್ಸಾಹ, ಬೆಂಬಲಗಳು, ಯಥಾಪ್ರಕಾರ ಉತ್ಸಾಹ ಪೂರ್ಣವಾಗಿ, ಸಹಾನುಭೂತಿ ಪೂರ್ವಕವಾಗಿ ಮುಂದುವರೆಯುತ್ತದೆ ಎಂದು ವಿಶ್ವಾಸಪೂರ್ವಕ ನಂಬಲಾಗಿದೆ.

ಸಪ್ತಗಿರಿ ಓದುಗರದು. ಅದನ್ನು ಸ್ವಾಮಿ ಹಾಗೂ ಭಕ್ತರ ನಡುವಣ ಸೇತುವೆಯನ್ನಾಗಿ ಮಾಡುವ ಅಪೇಕ್ಷೆ ತಿ.ತಿ.ದೇವಸ್ಥಾನಗಳ ಯಾಜಮಾನ್ಯದ್ದು. ಅದಕ್ಕಾಗಿ ಸಪ್ತಗಿರಿಯಲ್ಲಿ ಹೆಚ್ಚುಹೆಚ್ಚು ತಿರುಮಲೆಯ ಮಾಹಿತಿಗಳಿಗೆ ಪ್ರಾಧಾನ್ಯ ನೀಡಿ ಪ್ರಕಟಿಸಲಾಗುತ್ತಿದೆ. ಆಧ್ಯಾತ್ಮಿಕ ಸಾಂಸ್ಕೃತಿಕ ಸಾಹಿತ್ಯದೊಡನೆಯೇ ಸ್ವಾಮಿಯ ಸಂಗತಿಗಳನ್ನೂ ಸಾದರ ಪಡಿಸಿ ಶ್ರೀ ಸಾಮಾನ್ಯರಿಗೆ ತಿರುಮಲೆಯಲ್ಲಿ ಹೆಚ್ಚಿನ ಆಸಕ್ತಿಯನ್ನುಂಟುಮಾಡುವ ದಿಸೆಯಲ್ಲಿ ನಡೆಯುವ ಈ ಉದ್ದೇಶದಲ್ಲಿ ಓದುಗರು ತಮ್ಮ ಸಲಹೆ ಸೂಚನೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಬೇಕೆಂದು ಕೋರಲಾಗಿದೆ.

**ಡಾ|| ಪಿ. ಕೃಷ್ಣಯ್ಯ.**
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ಶ್ರೀ ಗಣಪತಿ

- ಅ. ಚಿ. ಜ್ಯೋತಿಷಿ.

ಗಣಪತಿಯು ಹಿಂದೂಗಳ ಅಚ್ಚು ಮೆಚ್ಚಿನ ದೇವತೆಯಾಗಿದ್ದು, ದೇವ ಪಂಚಾಯತದಲ್ಲಿ ಕೂಡ ಸಮಾವೇಶಗೊಂಡಿದ್ದಾನೆ. ಸಮೂಹಗಳ ನೇತಾರನೇ ಗಣಪತಿಯಾಗಿರುವನು. ಭಾದ್ರಪದ ಮಾಸದ ಶುಕ್ಲ ಪಕ್ಷದ ಚತುರ್ಥಿಯಂದು ಗಣಪತಿಯ ಉತ್ಸವವು ಸಡಗರದಿಂದ ನಡೆಯುತ್ತಿದೆ.

ಗಣಪತಿ - ಈ ಶಬ್ದದ ಮೂಲವು ಗುಣಪತಿಯಾದರೆ, ಸತ್ವ ರಜ ತಮ - ಈ ಮೂರು ಗುಣಗಳ ಅಧಿದೇವತೆ ಈ ಗುಣಪತಿ ಅಥವಾ ಗುಣೇಶ. ಇವನೇ ಗಣಪತಿಯು, ಮಾನವ ಶರೀರ ಮತ್ತು ಆನೆಯ ತಲೆಯಿರುವ ವೈಶಿಷ್ಟ್ಯ ಪೂರ್ಣ ದೇವತೆಯಾಗಿರುವನು. ಶರೀರದ ಸೌಂದರ್ಯ ಇಲ್ಲದಿದ್ದರೂ ಕೂಡ ಮನಸ್ಸಿನ ಸೌಂದರ್ಯ ಮತ್ತು ಬುದ್ಧಿ - ಇವು ಮಹತ್ವದ್ದಾಗಿವೆ. ಇದನ್ನು ಈ ಮೂರ್ತಿಯು ಸೂಚಿಸುತ್ತದೆ. ನಾಲ್ಕು ಕೈಗಳು, ಮೊರದಂತಿರುವ ಕಿವಿಗಳು, ಸೊಂಡಿಲು ಇವುಗಳಿಗೆ ಅರ್ಥ ಇದೆ. ಮೊರ, ಸೂರ್ಪಕರ್ಣ, ಮೊದಲಾದವು ವಸ್ತುವನ್ನು ಕಸದಿಂದ ಬೇರ್ಪಡಿಸುವಂತೆ ನಿರುಪಯುಕ್ತವನ್ನು ತ್ಯಜಿಸಿ ಉತ್ತಮ ಜ್ಞಾನವನ್ನು ಸ್ವೀಕರಿಸಬೇಕೆಂಬ ಅರ್ಥವನ್ನು ಹೊಂದುತ್ತದೆ. ಕಿರಿದಾದ ಕಂಗಳು, ಸೂಕ್ಷ್ಮ ದೃಷ್ಟಿಯ ಸಂಕೇತವು. ಸೊಂಡಿಲು ಉದ್ದವಾಗಿದೆ - ಪ್ರತಿಯೊಂದು ಸಂಗತಿಯ ವಾಸನಾ ಜ್ಞಾನದ ಸಂಕೇತ ಸೊಂಡಿಲು ಆಗಿದೆ. ಒಂದು ಪೂರ್ಣ ಮತ್ತು ಒಂದು ಅರ್ಧ - ಹೀಗೆ ಎರಡು ದಂತಗಳಿವೆ. ಇವು ಶ್ರದ್ಧೆ ಮತ್ತು ಬುದ್ಧಿ ಇವುಗಳ ಪ್ರತೀಕವಾಗಿದೆ. ಮಾನವನಿಗೆ ಬುದ್ಧಿಯು ಕಡಿಮೆಯಿದ್ದರೂ ನಡೆಯುತ್ತದೆ. ಆದರೆ ಶ್ರದ್ಧೆ - ಆತ್ಮಶ್ರದ್ಧೆಯು ಆವಶ್ಯಕವಾಗಿದೆ. ನಾಲ್ಕು ಕೈಗಳು ವಾಸನೆ ಮತ್ತು ವಿಕಾರಗಳ ಮೇಲೆ ಸಂಯಮವನ್ನೇರುತ್ತವೆ. ಗಣಪತಿಯು ಲಂಬೋದರನಾಗಿದ್ದಾನೆ. ಅನೇಕ ಸಂಗತಿಗಳನ್ನು ಉದರದಲ್ಲಿ ಹಾಕಿಡುವ ಸಂಗ್ರಹವಾಗಿದೆ. ಗಣಪತಿಯ ಕಾಲುಗಳು ಚಿಕ್ಕ ಆಕಾರ ಹೊಂದಿವೆ. ಯಾವುದೊಂದು ಕೆಲಸಗಳನ್ನು ಮಾಡುವಾಗ ಆತುರತೆ ಧಾವಂತ ಸಲ್ಲದು. ಪ್ರತಿಯೊಂದು ಕೆಲಸವನ್ನು ನಿಧಾನವಾಗಿ ಅಚ್ಚುಕಟ್ಟಾಗಿ ಮಾಡಬೇಕು. ಗಣಪತಿಗೆ ಮೋದಕವು ಅಚ್ಚು ಮೆಚ್ಚು. ಮೋದಕವಿದ್ದರೆ ಆನಂದ. ಈ ಆನಂದ ಕೊಡುವ ಸಾತ್ವಿಕ ಆಹಾರವು ಗಣಪತಿಗೆ ಪ್ರಿಯವಾಗಿದೆ.

ಏಕದಂತ ಚತುರ್ಭುಜನು ಪಾಶ ಮತ್ತು ಅಂಕುಶಗಳನ್ನು ಧರಿಸುವನು. ಒಂದು ಕೈಯಲ್ಲಿ ತುಣುಕಾದ ದಂತವನ್ನು ಹಿಡಿದಿದ್ದಾನೆ. ಇನ್ನೊಂದು ಕೈ ಅಭಯ ಹಸ್ತವಾಗಿದೆ. ಗಣಪತಿಯ ಧ್ವಜದ ಮೇಲೆ ಇಲಿಯ ಚಿಹ್ನೆಯಿದೆ. ಕೆಂಪುಬಣ್ಣ, ಲಂಬೋದರ, ಮೊರದಂತಿರುವ ಕಿವಿ ಇರುತ್ತದೆ. ಅಂಗಾಂಗಕ್ಕೆ ರಕ್ತ ಚಂದನದ ಲೇಪ ಹಚ್ಚುವವನು. ಗಣಪತಿಯು ಕೆಂಪು ಹೂಗಳಿಂದ ಪೂಜಿಸಲ್ಪಡುವನು. ಭಕ್ತರ ಮೇಲೆ ದಯೆ ಮಾಡುವವನು, ಜಗತ್ತಿಗೆ ಕಾರಣ ಸ್ವರೂಪನು, ಸೃಷ್ಟಿಯ ಆರಂಭಕ್ಕೆ ಇರುವವನು. ಇಂಥ ಗಣಪತಿಯ ಧ್ಯಾನ ಮಾಡುವವನು ಯೋಗಿಜನರಲ್ಲಿ ಶ್ರೇಷ್ಠನಾಗಿರುವನು ಎಂದು ಶ್ರೀಗಣಪತ್ಯುಪನಿಷತ್ತು ಹೇಳುತ್ತದೆ.

ಗಣಪತಿಯ ಮಹತ್ವಗಳು ಇವನನ್ನು ಪೂಜಿಸುವ ಹಿಂದೂ ಆರ್ಯರಿಗೆ ಅನಾರ್ಯರಿಂದ ತಿಳಿದು ಬಂದಿತೆನ್ನಲಾಗಿದೆ. ಆರ್ಯರು ಭಾರತಕ್ಕೆ ಬಂದಾಗ ಭಾರತದೊಳಗಿನ ಕೆಲ ಸಮುದಾಯಗಳು ಆನೆಯ ಪೂಜೆ ಮಾಡುತ್ತಿದ್ದವು. ಆನೆಯು ಬಲಾಢ್ಯ ಪ್ರಾಣಿಯಾಗಿದ್ದರಿಂದ ಅದರ ಪೂಜೆ ಮಾಡಬೇಕೆಂಬ ರೂಢಿಯು ಪ್ರಚಲಿತವಿತ್ತು. ಗಣಪತಿಯು ಅವರ ಗ್ರಾಮ ದೇವತೆಯಾಗಿದ್ದು ಹಳ್ಳಿಗಾಡಿನಲ್ಲಿ ಮರದ ಕೆಳಗೆ ಪೂಜೆಯು ನಡೆಯುತ್ತಿತ್ತು. ಗಣಪತಿಗೆ ರಕ್ತದಿಂದ ಅಭಿಷೇಕ



ಮಾಡುತ್ತಿದ್ದರು. ಈಗ ರಕ್ತಚಂದನ, ಕುಂಕುಮಗಳನ್ನು ಗಣಪತಿಗೆ ಏರಿಸಲಾಗುತ್ತದೆ. ಆರ್ಯರು ಭಾರತಕ್ಕೆ ಬಂದು ಅನಾರ್ಯರೊಡನೆ ಕೂಡಿದಾಗ ಅವರ ಕೆಲ ದೇವತೆಗಳನ್ನು ಸ್ವೀಕರಿಸಿದರು. ವೈದಿಕರು ಗಣಪತಿಯನ್ನು ಬ್ರಹ್ಮಣಸ್ಪತಿಯ ಒಂದು ರೂಪವೆಂದು ಮನ್ನಿಸಿದ್ದಾರೆ.

ಪಾರ್ವತಿಯ ಮೈಕೊಳೆಯಿಂದ ಮಾಡಿದ ಮೂರ್ತಿಯ ತಲೆಯನ್ನು ಶಿವನು ಕತ್ತರಿಸಿದಾಗ ಆನೆಯ ತಲೆಯನ್ನು ಜೋಡಿಸಿದ ಸಂಗತಿಯು ಎಲ್ಲರಿಗೂ ಗೊತ್ತಿದೆ. ಗಣಪತಿಯು ಶಿವ ಪಾರ್ವತಿಯರ ಮಗನಾಗಿರುವನು. ಋಷಿ ಮುನಿಗಳ ಕೆಲಸದಲ್ಲಿ ಅನೇಕ ಅಡಚಣೆಗಳು ಬಂದಾಗ ರುದ್ರ ಒಬ್ಬ ತೇಜಸ್ವಿ ಹುಡುಗನನ್ನು ತಯಾರು ಮಾಡಿದನು. ಅವನನ್ನು ನೋಡಿ ಪಾರ್ವತಿಯು ಕೋಪಗೊಂಡಳು. ಆಗ ನೀನು ಗಜಮುಖ, ಲಂಬೋದರ ಆಗು - ಎಂದು ಸಿಟ್ಟಿನಿಂದ ಶಾಪವನ್ನು ಕೊಟ್ಟಳು. ಆಗ ಶಿವನು ಕೆಲವು ಶಸ್ತ್ರಧಾರಿ ವಿನಾಯಕರನ್ನು ನಿರ್ಮಾಣ ಗೊಳಿಸಿದನು. ಈ ವಿನಾಯಕರುಗಳಿಗೆ ಶಿವನ ಮಗನು ನಾಯಕನಾಗಿ ಇರಬೇಕೆಂದು ಬ್ರಹ್ಮ ದೇವನು ಹೇಳಿದನು. ಶಿವನು ತನ್ನ ಮಗನಿಗೆ 'ನೀನು ಗಜ ಮುಖ, ವಿನಾಯಕ, ಎಂದದ್ದರಿಂದ ಗಣಪತಿ ಎಂಬ ಹೆಸರು ಪ್ರಾಪ್ತವಾಯಿತು. ಕ್ರೂರವಿರುವ ವಿನಾಯಕ ಗಣ ಇರುತ್ತಿದ್ದು ಇವರು ನಿನ್ನ ಸೇವಕರಾಗುವರು. ಯಜ್ಞ ಮೊದಲಾದ ಕೆಲಸದಲ್ಲಿ ನಿನಗೆ ಮೊದಲ ಪೂಜೆ ಸಲ್ಲಿಸುವರು. ಯಾರು ನಿನಗೆ ಮೊದಲ ಪೂಜೆ ಮಾಡುವುದಿಲ್ಲವೊ ಅವರುಗಳ ಕೆಲಸದಲ್ಲಿ ಅಡೆತಡೆ ಮಾಡು' ಎಂದು ಹೇಳಿದನು.

ಈ ಪ್ರಕಾರದಲ್ಲಿ ಗಣಪತಿಯು ವಿಘ್ನ ಹರ್ತನಾದನು. ಅಂದಿನಿಂದಲೂ ಪ್ರತಿ ಯೊಂದು ಕೆಲಸದಲ್ಲಿ ಗಣಪತಿಗೆ ಪೂಜೆ ಸಲ್ಲಿಸಲು ಆರಂಭವಾಯಿತು. ಗಣಪತಿಯ ಪ್ರತಿಷ್ಠೆ ಅಥವಾ ಅಕ್ಕಿಯ ಮೇಲೆ ತೆಂಗಿನಕಾಯಿ ಇಲ್ಲವೇ ಅಡಿಕೆಯಿಟ್ಟು ಗಣಪತಿಗೆ ಆರಂಭದಲ್ಲಿ ಪೂಜೆ ಮಾಡಲಾಗುತ್ತದೆ. ಇಲಿಯು ಆತನ ವಾಹನವಾಗಿದೆ. ಸದಾ ಅಡಗಿಕೊಂಡು ಇರುವ ಇಲಿಯು ಕತ್ತಲೆಯ ಪ್ರತೀಕ. ಹಗಲಿನಲ್ಲಿ ಸೂರ್ಯ ರೂಪನಾದ ಗಣಪತಿಯು ಇಲಿಯ ಮೇಲೆ ಕೂತುಕೊಳ್ಳುವನು.

ಹಿಮಾಲಯದಿಂದ ರಾಮೇಶ್ವರನ ತನಕ ಭಾರತದೊಳಗೆ ಅಸಂಖ್ಯಾತ ಗಣಪತಿಯ ಮೂರ್ತಿಗಳು ಪ್ರತಿ ಊರಿನಲ್ಲಿ ಇನ್ನೂ ಕೆಲವೆಡೆ ಮಂದಿರಗಳಲ್ಲಿ ವಿರಾಜಮಾನವಾಗಿವೆ. ಕೆಲವೆಡೆಗೆ ಗಣಪತಿಯು ಗ್ರಾಮ ದೇವತೆಯ ಸ್ಥಾನ ಮಾನವನ್ನು ಪಡೆದುಕೊಂಡಿರುವನು. ಮಹಾರಾಷ್ಟ್ರದಲ್ಲಿ ಅಷ್ಟ ವಿನಾಯಕ, ಗಣಪತಿ, ಫಳೆ, ಚಿಂಚವಾಡ ಕಳಂಬ ಸಿಂದ ಖೇಡದಲ್ಲಿಯೂ ಗಣಪತಿಯ ತೀರ್ಥ ಕ್ಷೇತ್ರಗಳಿವೆ. ಬೌದ್ಧಧರ್ಮವು ಭಾರತದೊಳಗೆ ಪ್ರಸಾರವಾದಂತೆ ಗಣಪತಿಯು ಚೀನಾ, ಜಪಾನ ಬ್ರಹ್ಮದೇಶ, ಕಾಂಬೋಡಿಯಾ, ಮೆಕ್ಸಿಕೋ ತುರ್ಕಿಸ್ಥಾನ ದೇಶಗಳಿಗೆ ತಲುಪಿದನು. ಲ್ಯಾಟಿನ್ ಸಂಸ್ಕೃತಿಯಲ್ಲಿಯ ಜಾನುಸ್ ದೇವತೆಗೆ ಮತ್ತು ಗಣಪತಿಗೆ ಹೆಚ್ಚು ಸಾಮ್ಯವಿದೆ.

ಇಂಥ ಈ ಮಹತ್ವದ ದೇವತೆಯ ಪೂಜೆಯು ಪ್ರತೀ ಚತುರ್ಥಿಗೆ ಆಗುತ್ತದೆ. ಭಾದ್ರಪದ ಮಾಸದ ಶುದ್ಧ ಚತುರ್ಥಿಗೆ ಗಣಪತಿಗೆ ವಾರ್ಷಿಕ ಜಯಂತಿಯಾಗುತ್ತದೆ. ಬಹು ಶ್ರದ್ಧೆಯಿಂದ ಎಲ್ಲೆಡೆಗೆ ಆನಂದೋತ್ಸಾಹದಿಂದ ಬಡವರಿಂದ ಶ್ರೀಮಂತರ ತನಕ ಎಲ್ಲ ವರ್ಗದವರು ಗಣಪತಿಯ ಉತ್ಸವವನ್ನು ಆಚರಿಸುತ್ತಾರೆ. ಗಣಪತಿಗೆ ಕೆಂಪು ಹೂವು ಮತ್ತು ದೂರ್ವೆ ಏರಿಸಿ ಮೋದಕವನ್ನು ನೈವೇದ್ಯ ಮಾಡುತ್ತಾರೆ. ಗಣಪತಿಯನ್ನು ಒಂದೂವರೆ ದಿವಸ, ಐದು ದಿನ, ಏಳು ದಿನ, ಇಲ್ಲವೆ ಹನ್ನೊಂದು ದಿವಸ ಪೂಜೆಯನ್ನು ಮಾಡಿ ಮೂರ್ತಿಯನ್ನು ನೀರಿನಲ್ಲಿ ವಿಸರ್ಜಿಸ ಲಾಗುತ್ತದೆ. ಕೆಲವರು ಗಣಪತಿಯನ್ನು ಗೌರಿಯೊಂದಿಗೆ ವಿಸರ್ಜಿಸುವರು. ಬರಗಾಲದಲ್ಲಿ ಗಣಪತಿಯಲ್ಲದೇ ಘಂಟಾಕರ್ಣ ಮತ್ತು ಶಿವ ಗಣಗಳ ಪೂಜೆ ಮಾಡುತ್ತಾರೆ. ಕನ್ನಡಿಗರು ಗಣೇಶ ಚತುರ್ಥಿಯನ್ನು ಬೆನಕನ ಹಬ್ಬ ಎನ್ನುತ್ತಾರೆ. ತಮಿಳು ಜನರು ಪಿಳ್ಳೈಯಾರ ಚವತಿ ಎಂದು ಕರೆಯುತ್ತಾರೆ.

ಮಹಾರಾಷ್ಟ್ರದಲ್ಲಿ ಗಣಪತಿ ಉತ್ಸವವು ಪೇಶವೆಯವರ ಕಾಲದಲ್ಲಿ ಆರಂಭವಾಯಿತು. ಭಾದ್ರಪದ ಶುದ್ಧ ಚತುರ್ಥಿಯಿಂದ ಈ ಉತ್ಸವ ಆಚರಿಸುತ್ತಾರೆ. 1893 ರಲ್ಲಿ ಲೋಕಮಾನ್ಯ ತಿಲಕರು ಇದಕ್ಕೆ ಸಾರ್ವಜನಿಕ ಉತ್ಸವದ ಸ್ವರೂಪ ನೀಡಿದರು. ದೇಶದೊಳಗೆ ದೇಶಭಕ್ತಿಯ ವಾತಾವರಣ ನಿರ್ಮಾಣವಾಗಬೇಕು. ಮತ್ತು ಸಮಾಜದಲ್ಲಿ ಜಾಗೃತಿಯಾಗಿ ಅದರಂತೆ ಇಡೀ ಸಮಾಜವು ಒಂದೆಡೆ ಸಂಘೀಭಾವದಿಂದ ನೆಲೆಸಬೇಕು. ಇದಕ್ಕಾಗಿ ಎಲ್ಲರಿಗೂ ಪ್ರಿಯವಿರುವ ದೇವತೆಗಳ ಸಾರ್ವಜನಿಕ ಉತ್ಸವ ಮಾಡುವ ಪದ್ಧತಿಯನ್ನು ಪುಣೆಯಲ್ಲಿ ಲೋಕಮಾನ್ಯರು ಪ್ರಾರಂಭಿಸಿದರು. ನಂತರ ಇಡೀ ಮಹಾರಾಷ್ಟ್ರದಲ್ಲಿ ಆರಂಭವಾಯಿತು. ಈಗ ಎಲ್ಲೆಡೆಗೆ ಆಚರಣೆಗೊಳ್ಳುತ್ತದೆ. ಚತುರ್ಥಿಯಿಂದ ಅನಂತ ಚತುರ್ದಶಿ ತನಕ ಈ ಉತ್ಸವವನ್ನು ಆಚರಿಸಿ ಕೊನೆಗೆ ದೊಡ್ಡ ಮೆರವಣಿಗೆಯಲ್ಲಿ ಗಣಪತಿ ವಿಸರ್ಜನೆ ಮಾಡಬೇಕು ಎಂಬ ಕಲ್ಪನೆಯನ್ನು ತಿಲಕರು ಅಂದು ಯೋಜಿಸಿ ಕಾರ್ಯರೂಪಕ್ಕೆ ತಂದರು. ಪುಣೆಯಲ್ಲಿಯ ಮೆರವಣಿಗೆಯಲ್ಲಿ ಮೊದಲ ಗಣಪತಿ, ಕಸಬಾ ಗಣಪತಿಯು ಗ್ರಾಮ ದೇವತೆಯಾಗಿರುವನು. ಆ ನಂತರ ಕೇಸರಿವಾಡಾದ ಗಣಪತಿಗೆ ಸ್ಥಾನವಿದೆ.

ಗಣಪತಿಗೆ ಬುದ್ಧಿ ವಾಣಿ - ಪತ್ನಿಯರು ಎನ್ನುತ್ತಾರೆ. 64 ಕಲೆಯ ದೇವ, ಉತ್ತಮ ಲೇಖಕನಾಗಿರುವನು. ಅವನು ಮಹಾಭಾರತದ ಲೇಖಕ. ಗಣಪತಿಯ ಪೂಜೆಯಲ್ಲಿ ದೂರ್ವೆಗಳಲ್ಲಿ ವನಸ್ಪತಿಯ ಎಲೆಗಳಿಗೆ ಹೆಚ್ಚು ಮಹತ್ವವಿದೆ. ದೂರ್ವೆಯ ಸ್ಪರ್ಶಮಾತ್ರದಿಂದ ಶರೀರದಲ್ಲಿ ಉಷ್ಣತೆಯು ಕಡಿಮೆಯಾಗುವುದು. ಹೊಟ್ಟೆ ಕೆಟ್ಟರೆ - ಮೊದಲಾದ ಅನೇಕ ರೋಗಗಳಿಗೆ ದೂರ್ವಾ ರಸವು ಉತ್ತಮ ಔಷಧಿಯಾಗಿದ್ದು ದೇಹಕ್ಕೆ ದೂರ್ವೆಯಿಂದ ಶಕ್ತಿ ಬಲ ನಿರ್ಮಾಣವಾಗುತ್ತದೆ. ಅಲ್ಲದೇ ದೂರ್ವೆಯು ಮಂಗಲಕಾರ್ಯದಲ್ಲಿ ಅವಶ್ಯಕವಾಗಿದೆ. ಹಿಂದೂಗಳ ಜೀವನದಲ್ಲಿ ಗಣಪತಿಯ ಸ್ತುತಿಯನ್ನು ಪವಿತ್ರ ಎಂದು ಮನ್ನಿಸಿದ್ದಾರೆ.

ಸರ್ವಾಗ್ರ ಪೂಜೆಯ ಗೌರವವನ್ನು ಪಡೆದ ಗಣಪತಿಗೆ ಇದೋ ನಮನಗಳು. ★

# ಸಂಭವಾಮಿ ಯುಗೇ ಯುಗೇ



- ಸಂತ ಹರಿಹರಾನಂದ ಸರಸ್ವತಿ.

ಕೃಪಾಸಿಂಧುವಾದ ಆ ಭಗವಂತನು ಈ ಜಗತ್ತನ್ನು ಸೃಷ್ಟಿಸಿ, ಇದರ ಸ್ಥಿತಿಗಾಗಿ - ''ಮರೀಚಿ'' ಮೊದಲಾದವರನ್ನು - ಪ್ರಥಮದಲ್ಲಿ ಸೃಷ್ಟಿಸಿ, ಅವರಿಗೆ ''ಪ್ರವೃತ್ತಿ ಧರ್ಮದ ಲಕ್ಷಣ''ವನ್ನು ಎಂದರೆ ಕರ್ಮಯೋಗ ರಹಸ್ಯವನ್ನು ಸಾದ್ಯಂತವಾಗಿ ಉಪದೇಶಿಸಿದ. ತರುವಾಯ - ಸನಕ - ಸನಂದಾದಿಗಳನ್ನು ಉತ್ಪತ್ತಿ ಮಾಡಿ, ಅವರಿಗೆ ''ನಿವೃತ್ತಿ ಲಕ್ಷಣ ಧರ್ಮ''ವನ್ನು - ಎಂದರೆ ಜ್ಞಾನಯೋಗ ರಹಸ್ಯವನ್ನು ಸವಿವರವಾಗಿ ಉಪದೇಶಿಸಿದ. ''ಪ್ರವೃತ್ತಿ ಲಕ್ಷಣ ಮತ್ತು ನಿವೃತ್ತಿ ಲಕ್ಷಣ'' ಇವು ಎರಡೂ, ವೇದೋಕ್ತ ಧರ್ಮದ ಎರಡು ಪ್ರಕಾರಗಳು. ಜಗತ್ತಿನ ಸ್ಥಿತಿಗೆ ಕಾರಣವಾಗಿರುವ ಇವು ''ಅಭ್ಯುದಯ -ನಿಃಶ್ರೇಯಸ'' ಪ್ರಾಪ್ತಿಗೆ ಹೇತುವಾಗಿವೆ. ಈ ''ಭುವನ ಜೀವನದ ಉನ್ನತಿ''ಯನ್ನು (ಸಾಂಸಾರಿಕ ಉನ್ನತಿ) ''ಅಭ್ಯುದಯ'' ಎಂದೂ, ಸಕಲ ಬಂಧಗಳ ಮುಕ್ತಿಗೆ - ''ನಿಃಶ್ರೇಯ ಸ'' ಎಂದು ಹೆಸರು. ಭಗವಂತನ ಆದೇಶದಂತೆ ''ಮರೀಚಿ ಮತ್ತು ಸನಕಾದಿಗಳು'' ಸನಾತನ ಧರ್ಮದ ಈ ಎರಡೂ ಪ್ರಕಾರಗಳನ್ನೂ - ಅತಿ ಉತ್ತಮ ಸ್ತರದಲ್ಲಿ ರಕ್ಷಿಸುತ್ತಾ ಬಂದರು. ದೀರ್ಘಕಾಲದ ತರುವಾಯ, ಮುಂದೆ - ಕಾಲದ ಮಹತ್ತಿನಿಂದಾಗಿ, ಅನುಷ್ಠಾತೃಗಳಲ್ಲಿ ಕಾಮವು ಉತ್ಪತ್ತಿಯಾಗಿ, ಸನಾತನ ವೇದಧರ್ಮದ ವರ್ಚಸ್ಸಿಗೆ ವಿರುದ್ಧವಾಗಿ ವರ್ತಿಸಲು (ಆರಂಭವಾಯಿತು) ತೊಡಗಿದರು.

ಇದರ ಪರಿಣಾಮ - ಅಧರ್ಮವು ತಲೆ ಎತ್ತಿ, ಭುವನದ ಬದುಕು ಭಾರವಾಯಿತು. ಎಲ್ಲಿ ನೋಡಿದರೂ, ದುಷ್ಪ್ರವೃತ್ತಿಯೂ - ದುರಾಚಾರವೂ ಮಿತಿಮೀರಿ ಸಾಂಕ್ರಾಮಿಕದಂತೆ ಹಬ್ಬಿತು. ಇಂತಹ ಸ್ಥಿತಿಯಲ್ಲಿ, ಮುಖ್ಯವಾಗಿ ''ಧರ್ಮವನ್ನು ನೆಲೆ''ಗೊಳಿಸಿ, ಜಗತ್ತನ್ನು ಸುಸ್ಥಿತಿಯಲ್ಲಿಡುವ ದೃಷ್ಟಿಯಿಂದ ಸಂಕಲ್ಪಗೈದ ಆದಿಪುರುಷನಾದ ನಾರಾಯಣ ನಾಮಕನಾದ ಭಗವಂತನು - ವೇದಧರ್ಮದ ಪರಿಪಾಲನೆ ಗಾಗಿ, ಸ್ವಯಂ ತಾನೇ ತನ್ನ ಮೂಲ ಪ್ರಕೃತಿಯನ್ನು ಉಪಾಧಿಮಾಡಿಕೊಂಡು, ಈ ಮರ್ತ್ಯ ಲೋಕದಲ್ಲಿ - ದಶರಥನ ಅಂಶದಿಂದ - ಕೌಸಲ್ಯೆಯ ಗರ್ಭದಲ್ಲಿ ಶ್ರೀರಾಮನೆಂಬ ಅಭಿಧಾನದಿಂದ ಅವತರಿಸಿ, ಅಧರ್ಮವನ್ನು ಮೆಟ್ಟಿ, ಧರ್ಮವನ್ನು ರಕ್ಷಿಸಿದ. (ಅದೇ) ಭಗವಂತನು ಮತ್ತೆ, ದ್ವಾಪರಯುಗದಲ್ಲಿ, ವಸುದೇವನ ಅಂಶದಿಂದ ದೇವಕೀಗರ್ಭದಲ್ಲಿ ಜನಿಸಿ, ಶ್ರೀಕೃಷ್ಣನೆಂಬ ಅಭಿಧಾನದಿಂದ ದುಷ್ಟರನ್ನು ಶಿಕ್ಷಿಸಿ - ಶಿಷ್ಟರನ್ನು ರಕ್ಷಿಸಿ - ಧರ್ಮಸಾಮ್ರಾಜ್ಯಸ್ಥಾಪನೆ ಮಾಡಿದ. ಭಗವಂತನು ಈ ಜಗತ್ತಿಗೆ ಬರುವುದನ್ನು 'ಅವತಾರ' ಎನ್ನುತ್ತಾರೆ. ನಿರಾಕಾರದಿಂದ ನರಾಕಾರಕ್ಕೆ ಇಳಿದು ಬರುವುದು ಅಥವಾ, ಪ್ರಕಟಗೊಳ್ಳುವುದು ಅವತಾರ. ಆ ಪರಮ ಕರುಣಾನಿಧಿಯಾದ ಪರಮಾತ್ಮನು - ನಮ್ಮ ನಿಮ್ಮಂತೆ - ನವಮಾಸ ತಾಯಗರ್ಭದಲ್ಲಿದ್ದು, ಶುಕ್ಲ ಶೋಣಿತಗಳಿಂದ ಹೊರಜಗತ್ತಿಗೆ ಬರಬೇಕಾದ ಪ್ರಮೇಯವಿಲ್ಲ. ಅವನು ''ಜ್ಞಾನ - ಐಶ್ವರ್ಯ, ಶಕ್ತಿ, ಬಲ, ವೀರ್ಯ ತೇಜಸ್ಸು'' ಎಂಬ ಷಡ್ಗುಣಗಳಿಂದ ಸಂಪನ್ನನಾದವನು. ಅವನಿಗೆ ಹುಟ್ಟು - ಸಾವುಗಳಿಲ್ಲ. ಧರ್ಮ - ಅಧರ್ಮದ ಪ್ರತಿಬಂಧಗಳಿಲ್ಲ. ಅವನು ''ನಿತ್ಯಶುದ್ಧ ಬುದ್ಧ ಮುಕ್ತ'' ಸ್ವರೂಪನು.

ಆ ಪರಮಾತ್ಮನೇ - ತನ್ನ ಅವತಾರದ ಉದ್ದಿಶ್ಯವನ್ನು, ಮಹತ್ವವನ್ನು ಮಧ್ಯಮ ಪಾಂಡವನಾದ ಪಾರ್ಥನಿಗೆ ತಿಳಿಸುವ ಮೂಲಕ ಜಗತ್ತಿಗೇ ಪ್ರಕಟಪಡಿಸಿದ್ದಾನೆ.

ಹೇ ಕುಂತೀಪುತ್ರ, ದುಷ್ಟಶಿಕ್ಷೆ - ಶಿಷ್ಟರಕ್ಷಣೆ, ಧರ್ಮಪರಿಪಾಲನೆಗಾಗಿ ನನ್ನ ಮೂಲ ಪ್ರಕೃತಿಯನ್ನು ಉಪಾಧಿಮಾಡಿಕೊಂಡು, ಯುಗ ಯುಗದಲ್ಲಿಯೂ ಅವತರಿಸಿ ಬರುತ್ತೇನೆ. ನನ್ನ ಜನ್ಮವು ದಿವ್ಯವಾದುದು. ನನ್ನ ಕರ್ಮವೂ ದಿವ್ಯವಾದುದು. (ಸಾಧುಪರಿತ್ರಾಣಾದಿ ಕರ್ಮಗಳು) ಆದರೆ ಮಧ್ಯಮ ಪಾಂಡವ-

ಅವಜಾನಂತಿ ಮಾಂ ಮೂಢಾಃ
ಮಾನುಷೀಂ ತನುಮಾಶ್ರಿತಂ

- ಮಾನುಷಶರೀರ ಧಾರಿಯಾದ ನನ್ನನ್ನು ಮೂಢರು, ಮಂದಮತಿಗಳು ತಿಳಿಯರು. ''ಮರ್ತ್ಯಾವತಾರಸ್ತು ಇಹ ಮರ್ತ್ಯ ಶಿಕ್ಷಣಂ'' ಲೋಕಶಿಕ್ಷಣಕ್ಕಾಗಿ ಈ ಮರ್ತ್ಯಲೋಕದಲ್ಲಿ ನಾನು ಮಾನವಾವತಾರದಲ್ಲಿ ಬರುವುದು ಅನಿವಾರ್ಯ.

ಈ ಅನಿವಾರ್ಯತೆಯನ್ನು ಅರ್ಥಮಾಡಿ ಕೊಂಡು, ನನ್ನಲ್ಲಿ ಶರಣಾದವರು - ''ನನ್ನ ಸಂಪೂರ್ಣ ಅನುಗ್ರಹ''ಕ್ಕೆ ಪಾತ್ರರಾಗುವರು - ಇದರಲ್ಲಿ ಸಂಶಯವಿಲ್ಲ. ಈ ಬಗೆಯ ಅಭಯವನ್ನು ಕೊಡುತ್ತ ಪರಮಾತ್ಮನು - ತನ್ನ ''ಭಕ್ತರ - ಭಾಗವತರ'' ಯೋಗಕ್ಷೇಮವನ್ನು ಸದಾ ಸರ್ವದಾ ಚಿಂತಿಸುತ್ತಾನೆ.

''ನ ಮೇ ಭಕ್ತಃ ಪ್ರಣಶ್ಯತಿ'' ನನ್ನನ್ನು ನಂಬಿದ ಭಕ್ತರು - ಭಾಗವತರು ಎಂದಿಗೂ ನಾಶಹೊಂದುವುದಿಲ್ಲ. ''ಯೋಗಕ್ಷೇಮಂ - ವಹಾಮ್ಯಹಂ'' ಅಂತಹವರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ ಎಂದು ತುಂಬು ಭರವಸೆ ನೀಡಿರುವ ಭಗವಂತನು ತನ್ನ ಭಕ್ತಲೋಕವನ್ನು ಅನುಗ್ರಹಿಸುವುದಕ್ಕಾಗಿ. ''ತಿರುಮಲೆಯಲ್ಲಿ ಸಪ್ತಗಿರಿ'' ವಾಸನಾಗಿ - ಭಕ್ತವೃಂದವನ್ನು ನಿತ್ಯನಿರಂತರ ಕೈಬೀಸಿ ಕರೆಯುತ್ತಿರುವನು. ★

# ಮಧುರಾನಗರ

- ಆದ್ಯರಾಮಾಚಾರ್ಯ.

ವಿಶ್ವವಂದ್ಯನಾದ ಗೀತಾಚಾರ್ಯನು ಜನಿಸಿದ ಮಹಾ ಪವಿತ್ರ ಭೂಮಿ ಹಾಗೂ ಆತನ ಲೀಲಾ ವಿನೋದಗಳ ತವರು ಎಂದೆನಿಸಿಕೊಂಡಿರುವ ವ್ರಜಭೂಮಿಯು ಸಾತ್ವಿಕರ ಹೃನ್ಮನಗಳನ್ನು ಸೆಳೆಯುವ ದಿವ್ಯ ಕೇಂದ್ರವೆನಿಸಿದೆ.

ಒಂದು ಕಾಲದಲ್ಲಿ ಮಧುಪನ್ನ, ಮಧುಪುರಿ, ಮಧುರಾ, ಮಥುರಾ ಎಂದೆಲ್ಲ ಹೆಸರುಗಳು ಪುರಾಣಗಳಲ್ಲಿ ವರ್ಣಿತವಾಗಿವೆ. ಅದನ್ನೇ ವ್ರಜಭೂಮಿ ಎಂದು ಕರೆಯುತ್ತಾರೆ. ಅಯೋಧ್ಯಾಧಿಪತಿಯಾದ ಶ್ರೀರಾಮಚಂದ್ರ ಪ್ರಭು ತನ್ನ ಸೋದರನಾದ ಶತ್ರುಘ್ನನನ್ನು ಕರೆದು 'ಮಧುನಾಮಕ ದೈತ್ಯನಿಂದ ಅನೇಕ ತಾಪಸಿಗರಿಗೆ ತೊಂದರೆಯಾಗತೊಡಗಿದೆ. ಮುನಿಗಳ ಯೋಗಕ್ಷೇಮವೇ ನಮ್ಮ ಕರ್ತವ್ಯ. ಆದುದರಿಂದ ನೀನು ಆ ದೈತ್ಯನನ್ನು ಸಂಹಾರ ಮಾಡಿ ವ್ರಜಭೂಮಿಯಲ್ಲಿ ರಾಜ್ಯವನ್ನಾಳಬೇಕೆ'ಂದು ಅಪ್ಪಣೆ ಮಾಡಿದನು. ಶತ್ರುಘ್ನನಿಂದ ಹತನಾದ ಮಧು ದೈತ್ಯನು ಕೊನೆಗಾಲದಲ್ಲಿ ತನ್ನ ಹೆಸರಿನಿಂದಲೇ ಈ ನಗರವು ಮುಂದುವರೆಯುವಂತೆ ಅನುಗ್ರಹಿಸಬೇಕೆಂದು ಅನನ್ಯವಾಗಿ ಪ್ರಾರ್ಥಿಸಿಕೊಂಡನು. ಆತನ ಅಪೇಕ್ಷೆಯಂತೆ ಮಧುರಾ ಎಂಬ ಹೆಸರೇ ಮುಂದುವರೆಯುವಂತಾಯಿತು. ದ್ವಾಪರಾಂತ್ಯ ದಲ್ಲಿಇದೇ ವ್ರಜಭೂಮಿಯಲ್ಲಿ ಭಗವದವತಾರ ವಾಯಿತು. ಪರಮಾತ್ಮ ಶ್ರೀಕೃಷ್ಣ ಮಧುರಾಧಿಪತೇ ಎಂಬ ಹೆಸರಿನಿಂದಲೇ ಬೆಳೆದನಲ್ಲದೆ ಈ ಮಧುರಾನಗರವೂ ಸಹ ತನ್ನೊಂದಿಗೇ ಬೆಳೆಯುವಂತೆ ಮಾಡಿದನು.

ಸವಿದ್ಯತೇಚ ಪಾತಾಲೇ
ನಾ ಂತರಿಕ್ಷೇ ನ ಮಾನುಷೇ
ಸಮಾನಂ ಮಧುರಾಯಾ ಹಿ
ಪ್ರಿಯಂ ಮಮ ವಸುಂಧರೇ
ಸುರಮ್ಯಾ ಚ ಸುಶಾಸ್ತ್ರಾ ಚ
ಜನ್ಮಭೂಮಿ ಸ್ಥಥಾ ಮಮ

ಭೂಮಿ, ಪಾತಾಳ, ಅಂತರಿಕ್ಷ ಇಲ್ಲವೆ ಸ್ವರ್ಗ ಇವೆಲ್ಲವುಗಳಿಗಿಂತಲೂ ಮಧುರಾ ನಗರವು ಪರಮ ಶ್ರೇಷ್ಠವಾದ ಸ್ಥಳವೆನಿಸಿರುವುದು. ಇದಕ್ಕೆ ಸಮಾನವಾದ ತೀರ್ಥವು ಬೇರೊಂದಿಲ್ಲ. ಇದು ಬಹು ರಮ್ಯವಾದ ಹಾಗೂ ಶಾಂತಿದಾಯಕವಾದ ಪಾವನ ಭೂಮಿಯಾಗಿರುವುದು. ಭಗವಾನ್ ಶ್ರೀಕೃಷ್ಣನು ಅವತರಿಸಿದ ನೆಲವಲ್ಲವೆ ಇದು. ಈ ಕ್ಷೇತ್ರದಲ್ಲಿ ಒಂದು ಕ್ಷಣ ಕಳೆದರೂ ಸಾಕು. ಸಾವಿರಾರು ವರುಷಗಳಿಂದ ಸಂಚಿತವಾದ ನಮ್ಮ ಪಾಪಗಳ ರಾಶಿಯು ನಾಶವಾಗುತ್ತವೆಂಬ ನಂಬಿಕೆ ಭಾರತೀಯರದ್ದಾಗಿದೆ.

ಪುಷ್ಕರ ಕ್ಷೇತ್ರದಲ್ಲಿ ಕಾರ್ತೀಕ ಪೌರ್ಣಿಮೆಯ ದಿನ ಸ್ನಾನ ಮಾಡಿದವರಿಗೆ ಯಾವ ಪುಣ್ಯ ಪ್ರಾಪ್ತಿಯಾಗುವುದೋ ಅಂಥ ಪುಣ್ಯವು ಜಿತೇಂದ್ರಿಯ ಮನಸ್ಸಿನಿಂದ ಭಗವದ್ಧ್ಯಾನ ಪರರಾದಲ್ಲಿ ಆ ಪುಣ್ಯವು ಈ ಕ್ಷೇತ್ರ ದಲ್ಲಿ ಪ್ರಾಪ್ತವಾಗುತ್ತದೆ. ಇದು ಸಾಧಕರಿಗೆಲ್ಲ ಸಿದ್ಧಿಯ ತಾಣವೆನಿಸಿಕೊಂಡಿದೆ. ಈ ಕ್ಷೇತ್ರದಲ್ಲಿ ಕೃಷ್ಣಜನ್ಮಾಷ್ಟಮಿ, ಯಮದ್ವಿತೀಯಾ, ಜ್ಯೇಷ್ಠ ಶುಕ್ಲ ದ್ವಾದಶಿ ಈ ದಿನಗಳಲ್ಲಿ ಯಮುನಾ ನದಿಯಲ್ಲಿ ಯಾರು ಸಂಕಲ್ಪಪೂರ್ವಕಸ್ನಾನ ಮಾಡುವರೋ ಅವರೆಲ್ಲರಿಗೂ ಸದ್ಗತಿಯು ಲಭಿಸುತ್ತದೆ. ಶ್ರೀಕೃಷ್ಣ ದರ್ಶನ ಮಾತ್ರದಿಂದ ಜೀವನವು ಉದ್ಧಾರವಾಗುತ್ತದೆ.

ಈ ತೀರ್ಥಕ್ಷೇತ್ರದಲ್ಲಿ ಮಧುವನ, ಕುಮುದವನ, ಕಾಮ್ಯಕವನ, ಬಹುಲವನ, ಭದ್ರವನ, ಸ್ವಾದಿರವನ, ಶ್ರೀವನ, ಮಹಾವನ, ಲೋಹವನ, ಭಾಂಡೀರವನ, ಹಾಗೂ ವೃಂದಾವನ - ಮೊದಲಾಗಿ ಹನ್ನೆರಡು ರಮಣೀಯವಾದ ವನಗಳಿವೆ. ಇವೆಲ್ಲವುಗಳಲ್ಲಿ ಬಾಲಗೋಪಾಲನಿಗೆ ವೃಂದಾವನವು ಬಹು ಅಚ್ಚುಮೆಚ್ಚಿನ ತಾಣವೆಂದು ಪುರಾಣಗಳಲ್ಲಿ ವರ್ಣಿಸಲಾಗಿದೆ.

ವ್ರಜಮಂಡಲವು ಎಂಬತ್ನಾಲ್ಕು ಸ್ಥಳವನ್ನು ವ್ಯಾಪಿಸಿದೆ. ಮೇಲೆ ಹೇಳಿದ ಯಾವುದೇ ತೀರ್ಥಗಳಿಗಾಗಲಿ ಅಥವಾ ವನಗಳಿಗಾಗಲೀ ನಾವು ಹೋಗಬೇಕಾದಲ್ಲಿ ಅದಕ್ಕೆಲ್ಲ ಮಧುರಾ ನಗರವೇ ಕೇಂದ್ರಬಿಂದುವಾಗುತ್ತದೆ. ಈ ನಗರದ ನಾಲ್ಕು ದಿಕ್ಕಿನ ನಾಲ್ಕು ಮಹದೇವನ ಮಂದಿರಗಳಿಗೆ ನಾಲ್ಕು ತೀರ್ಥಗಳಿವೆ.

ಈ ಸ್ಥಳದ ಇತಿಹಾಸವು ಬಹು ಪ್ರಾಚೀನವಾದುದು. ಸೃಷ್ಟಿಯ ಆರಂಭ ಕಾಲದಲ್ಲಿ ಸ್ವಾಯಂಭುವಮನುವಿನ ಮೊಮ್ಮಗನಾದ ಧ್ರುವಕುಮಾರನಿಗೆ ಮಹರ್ಷಿ ನಾರದರು ''ಪುಣ್ಯಂ ಮಧುವನಂ ಸಾನ್ನಿಧ್ಯಂ ನಿತ್ಯದಾ ಹರೇ'' ಎಂದು ಉಪದೇಶ ಮಾಡಿ ಕಳಿಸಿದರು. ಮಧುವನದಲ್ಲಿ ಶ್ರೀಹರಿಯ ಸಾನ್ನಿಧ್ಯ ವಿಶೇಷವಿರುವುದರಿಂದ ನೀನು ಮಧುವನದಲ್ಲಿ ತಪಸ್ಸೆಯ ಬೇಕೆಂದು ತಿಳಿಸಿದರು. ಇದರಿಂದಾಗಿ ಧ್ರುವಕುಮಾರನಿಗೆ ಕೇಶವರೂಪಿ ಭಗವ ದ್ದರ್ಶನವಾದ ಸ್ಥಳವೇ ಮಧುವನವಾಗಿರುವೆಂದು ಹೇಳಲಾಗಿದೆ. ಮುಂದೆ ಶೂರಸೇನ ವಂಶದ ಕ್ಷತ್ರಿಯರು ಈ ವ್ರಜಭೂಮಿಯನ್ನು ತಮ್ಮದಾಗಿ ಮಾಡಿಕೊಂಡು ರಾಜ್ಯವನ್ನಾಳಿದರು.

ಮಧುರಾ ನಗರದ ಪವಿತ್ರ ಸಲಿಲವೆನಿಸಿದ ಯಮುನಾ ನದಿಯ ದಂಡೆಗುಂಟ ಇಪ್ಪತ್ನಾಲ್ಕು ಸ್ನಾನಘಟ್ಟಗಳಿವೆ. ಅವುಗಳಲ್ಲಿ ವಿಶ್ರಾಮಘಾಟದ ಉತ್ತರ ಭಾಗದಲ್ಲಿ ಹನ್ನೆರಡು ಘಟ್ಟಗಳಿದ್ದರೆ, ದಕ್ಷಿಣ ಭಾಗದಲ್ಲಿ ಹನ್ನೆರಡು ಸ್ನಾನ ಘಾಟಗಳಿವೆ. ಅವೆಲ್ಲವುಗಳ ಹೆಸರು ಈ ಕೆಳಗಿಂತಿದೆ.

1) ವಿಶ್ರಾಮಘಾಟ, 2) ಪ್ರಯಾಗಘಾಟ, 3) ಕನಖಲಘಾಟ, 4) ಬಿಂದು ಘಾಟ, 5) ಬಂಗಾಲಿಘಾಟ, 6) ಸೂರ್ಯಘಾಟ, 7) ಚಿಂತಾಮಣಿಘಾಟ, 8) ಧ್ರುವಘಾಟ, 9) ಋಷಿಘಾಟ, 10) ಮೋಕ್ಷಘಾಟ,

(15 ನೇ ಪುಟ ನೋಡಿ.)

# ಗುರುವಾಯೂರು ಶ್ರೀಕೃಷ್ಣ

- ಎಸ್. ಕುಮುದವಲ್ಲಿ.

ಪೀತಾಂಬರಂ
ಕರವಿರಾಜಿತ ಶಂಖಚಕ್ರಂ
ಕೌಮೋದಕೀ ಸರಸಿಜಂ
ಕರುಣಾಸಮುದ್ರಂ
ರಾಧಾ ಸಹಾಯಮತಿ
ಸುಂದರ ಮಂದಹಾಸಂ
ವಾತಾಲಯೇಶಮನಿಶಂ
ಹೃದಿ ಭಾವಯಾಮಿ

ಇಂದಿನ ಕಂಪ್ಯೂಟರ್‌ಯುಗ ಹಾಗೂ ನಾಗರಿಕ ಪ್ರಪಂಚದಲ್ಲಿ ನಾಸ್ತಿಕತೆ ಮತ್ತು ಅಶಾಂತಿಯ ವಾತಾವರಣ ತಾಂಡವವಾಡುತ್ತಿದೆ. ಹಾಗೆಂದು ಅದನ್ನೇ ಮುಂದುವರಿಯಲು ಬಿಡದೆ, ದಿನದಲ್ಲಿ ಸ್ವಲ್ಪ ಸಮಯವಾದರೂ ಪರಮಾತ್ಮನನ್ನು ಏಕಾಗ್ರಚಿತ್ತದಿಂದ ಪೂಜಿಸಿ, ಮನಸ್ಸಿಗೆ ನೆಮ್ಮದಿ, ಶಾಂತಿ, ಸಮಾಧಾನ ಹಾಗೂ ನಿತ್ಯವಾದ ಆನಂದವನ್ನು ಪಡೆದುಕೊಳ್ಳುವುದು ಒಂದು ಉತ್ತಮವಾದ ಮಾರ್ಗವಾಗಿದೆ. ''ಜ್ಞಾನ ಮತ್ತು ಪ್ರೇಮದ ಸಮನ್ವಯವೇ ಭಕ್ತಿ.'' ಆದ್ದರಿಂದ ಭಕ್ತಿಭಾವವನ್ನು ಜಾಗೃತಗೊಳಿಸಿ, ದೃಢವಾದ ಭಕ್ತಿಗೆ ಸುಲಭವಾಗಿ ಒಲಿಯುವ ಶ್ರೀಕೃಷ್ಣನನ್ನು ಧ್ಯಾನಿಸಿ, ಜಪಿಸಿ, ಪ್ರಾರ್ಥಿಸಿ, ಪೂಜಿಸಿ, ಕಾಲದ ಸದುಪಯೋಗ ಪಡಿಸಿಕೊಂಡು ಪರಮಾತ್ಮನ ಕೃಪಾಕಟಾಕ್ಷಕ್ಕೆ ಪಾತ್ರರಾಗುವುದು ಬುದ್ಧಿವಂತರ ಲಕ್ಷಣವಾಗಿದೆ.

ಪ್ರಸ್ತುತ ನಾವು ಕೇರಳದ ಪ್ರಸಿದ್ಧ ತೀರ್ಥಕ್ಷೇತ್ರವಾದ ಗುರುವಾಯೂರಿನಲ್ಲಿ ನೆಲೆಸಿರುವ ಜಗದ್ರಕ್ಷಕನಾದ ಶ್ರೀಕೃಷ್ಣನ ವಿಚಾರವನ್ನು ಸೂಕ್ಷ್ಮವಾಗಿ ತಿಳಿದುಕೊಳ್ಳಲು ಯತ್ನಿಸೋಣ. ಗುರುವಾಯೂರು ಕೃಷ್ಣನ ಮಹಿಮೆಯು ನಾರದಪುರಾಣದಲ್ಲಿ ವರ್ಣಿತವಾಗಿದೆ. ದೇವತೆಗಳ ಗುರುವಾದ ಬೃಹಸ್ಪತಿ ಮತ್ತು ವಾಯು - ಇವರುಗಳಿಂದ ನಾರದನ ಅಧ್ಯಕ್ಷತೆಯಲ್ಲಿ ಪರಶುರಾಮನ ಸಮ್ಮುಖದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ವೈಕುಂಠನಾರಾಯಣನು ಗುರುವಾಯೂರಿನಲ್ಲಿ ನೆಲೆನಿಂತು, ಜನರ ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸಿ, ಆರೋಗ್ಯಭಾಗ್ಯವನ್ನಿತ್ತು, ''ಗುರುವಾಯೂರಪ್ಪ'' ನೆಂದು ಪ್ರಸಿದ್ಧಿಯಾಗಿ ಲೋಕದ ಸಮಸ್ತ ಜನರನ್ನೂ ರಕ್ಷಿಸುತ್ತಿರುವ ಶ್ರೀಕೃಷ್ಣ ಪರಮಾತ್ಮನಾಗಿದ್ದಾನೆ. ಗುರು ಮತ್ತು ವಾಯು ಇವರಿಂದ ಪ್ರತಿಷ್ಠಾಪಿಸಲ್ಪಟ್ಟದ್ದರಿಂದ ಈ ಊರಿಗೆ ಗುರುವಾಯೂರು, ಪವನಪುರ ಎಂದೂ ಕೃಷ್ಣನಿಗೆ ಗುರುವಾಯೂರಪ್ಪ, ಪವನಪುರಪತಿ, ವಾತಾಲಯೇಶ ಎಂಬ ಹೆಸರುಗಳೂ ಬಂದಿವೆ.

ಶ್ರೀಕೃಷ್ಣನು ಕಂಸನನ್ನು ಕೊಂದನಂತರ ದ್ವಾರಕೆಯೆಂಬ ನಗರವನ್ನು ಕಟ್ಟಿ, ಅಲ್ಲೊಂದು ಮಂದಿರವನ್ನು ಸ್ಥಾಪಿಸಿ, ಅದರಲ್ಲಿ ತನ್ನದೇ ಪ್ರತಿರೂಪವಾದ ಕೃಷ್ಣಮೂರ್ತಿಯನ್ನು ಪ್ರತಿಷ್ಠಾಪಿಸಿದನು. ಯದುವಂಶವು ನಾಶಹೊಂದಿ, ದ್ವಾರಕೆಯು ಸಮುದ್ರದಲ್ಲಿ ಮುಳುಗಿದಾಗ ಪ್ರಳಯಾರ್ಣವದಲ್ಲಿ ತೇಲುತ್ತಿದ್ದ ಕೃಷ್ಣವಿಗ್ರಹವನ್ನು ಕಂಡು ಗುರು (ಬೃಹಸ್ಪತಿ) ಮತ್ತು ವಾಯು ಕೃಷ್ಣನ ಆಣತಿಯಂತೆ ಭೂಲೋಕದಲ್ಲಿ ಒಂದು ಪ್ರಶಸ್ತವಾದ ಸ್ಥಳವನ್ನು ಹುಡುಕಿ, ಅಲ್ಲಿ ಆ ವಿಗ್ರಹವನ್ನು ಪ್ರತಿಷ್ಠಾಪಿಸಲು ಮುನ್ನಡೆದರು.



ಹೀಗೆ ಗುರು ಮತ್ತು ಶ್ರೀಕೃಷ್ಣನ ವಿಗ್ರಹವನ್ನು ತಲೆಯಮೇಲೆ ಹೊತ್ತವಾಯು - ಇವರಿಬ್ಬರೂ ನಾರದನ ಮೇಲ್ವಿಚಾರಣೆಯಲ್ಲಿ ವೈಕುಂಠ ನಾರಾಯಣನನ್ನು ಭೂಲೋಕದಲ್ಲಿ ಪ್ರತಿಷ್ಠಾಪಿಸಲು ಪ್ರಶಸ್ತವಾದ ಜಾಗವನ್ನು ಹುಡುಕಿಕೊಂಡು ಹೋಗುತ್ತಿರುವಾಗ ಈಗಿನ ಗುರುವಾಯೂರಿರುವಸ್ಥಳವು ಯೋಗ್ಯವಾದದ್ದೆಂದು ತಿಳಿದು, ಅಲ್ಲಿ ಕೃಷ್ಣನನ್ನು ಪ್ರತಿಷ್ಠಾಪಿಸಲು ತೀರ್ಮಾನಿಸಿದರು. ಆದರೆ ಅಲ್ಲಿರುವ ರುದ್ರತೀರ್ಥದ ಬಳಿ ತಪಸ್ಸು ಮಾಡುತ್ತಾ ಅಲ್ಲಿ ಮೊದಲೇ ನೆಲೆನಿಂತಿದ್ದ ಶಿವನು ಈ ಸ್ಥಳವು ಮಹಾಪವಿತ್ರವಾದದ್ದೆಂದೂ, ತನಗೆ ಇರಲು ಬೇರೊಂದು ಯೋಗ್ಯವಾದ ಜಾಗವನ್ನು ಹುಡುಕಿಕೊಟ್ಟರೆ, ತಾನು ಅಲ್ಲಿಗೆ ಹೋಗಿ, ತಾನಿರುವ ಸ್ಥಳವನ್ನು ಕೃಷ್ಣನಿಗೆ ಬಿಟ್ಟುಕೊಡುವುದಾಗಿ ಹೇಳಿದನು. ಅದಕ್ಕೆ ಒಪ್ಪಿದ ಗುರು, ವಾಯು, ಹಾಗೂ ನಾರದರು ಗುರುವಾಯೂರಿಗೆ ಅತ್ಯಂತ ಸಮೀಪದಲ್ಲಿಯೇ ಇರುವ ಈಗಿನ ಮಮ್ಮಿಯೂರು ಸ್ಥಳವನ್ನು ಶಿವನಿಗೆ ಹುಡುಕಿಕೊಟ್ಟರು. ನಂತರ ಶಿವನು ಸಂತೋಷದಿಂದ ಗುರುವಾಯೂರನ್ನು ಕೃಷ್ಣನಿಗೆ ಬಿಟ್ಟುಕೊಟ್ಟು ಪಾರ್ವತಿಯಿದ್ದ ಮಮ್ಮಿಯೂರಿಗೆ ಹೋಗಿ ನೆಲೆಸಿ, ''ಮಮ್ಮಿಯೂರು ಶಿವನ್'' ಎಂದು ಪ್ರಖ್ಯಾತಿಹೊಂದಿ ಭಕ್ತರನ್ನು ಕಾಪಾಡುತ್ತಿದ್ದಾನೆ. ಆದರೆ ಗುರುವಾಯೂರು ಕೃಷ್ಣನ ದೇವಸ್ಥಾನದ ಪಕ್ಕದಲ್ಲಿರುವ ಕೊಳವು ಶಿವನ ಜ್ಞಾಪಕಾರ್ಥವಾಗಿ ಈಗಲೂ ''ರುದ್ರತೀರ್ಥ''ವೆಂದೇ ಹೆಸರುವಾಸಿಯಾಗಿದೆ. ಶ್ರೀಕೃಷ್ಣನ ಸೇವೆಗಾಗಿ ಗುರುವಾಯೂರಿಗೆ ಹೋಗುವ ಭಕ್ತರು ಮೊದಲು ರುದ್ರತೀರ್ಥದಲ್ಲಿ ಸ್ನಾನಮಾಡಿ, ಶ್ರೀಕೃಷ್ಣನ ದರ್ಶನಮಾಡಿ ಅನಂತರ ಹತ್ತಿರದಲ್ಲಿಯೇ ಇರುವ ಮಮ್ಮಿಯೂರಿಗೆ ಹೋಗಿ ಶಿವನ ದರ್ಶನಮಾಡಿ ಬಂದರೆ, ಗುರುವಾಯೂರು ತೀರ್ಥಕ್ಷೇತ್ರ

ಯಾತ್ರೆಯ ಸಂಪೂರ್ಣ ಫಲವು ದೊರೆತು, ಶ್ರೀಕೃಷ್ಣನ ದಿವ್ಯಾನುಗ್ರಹಕ್ಕೆ ಪಾತ್ರರಾಗುತ್ತಾರೆ. ಈ ರೀತಿಯಾಗಿ ಈಗ ''ಭೂಲೋಕ ವೈಕುಂಠ''ವೆನಿಸಿರುವ ಗುರುವಾಯೂರಿನ ಕೃಷ್ಣಮೂರ್ತಿಯ ಸ್ಥಾಪನಾ ಹಿನ್ನೆಲೆಯಿದೆ.

ಪರೀಕ್ಷಿತ್ ಮಹಾರಾಜನ ಮಗ ಜನಮೇಜಯನು ತನ್ನ ತಂದೆಯ ಸಾವಿಗೆ ಕಾರಣವಾದ ಸರ್ಪವಂಶವನ್ನೇ ನಾಶಮಾಡಲು ತೀರ್ಮಾನಿಸಿ, ಮಹಾಸರ್ಪಯಾಗವನ್ನುಮಾಡಿ, ಏನೂ ಅರಿವಿಲ್ಲದ ಸರ್ಪಗಳೆಲ್ಲವನ್ನೂ ಆಹುತಿಕೊಟ್ಟಾಗ, ಅದರ ಪಾಪದ ಫಲವಾಗಿ ಅವನಿಗೆ ಅತಿ ಭಯಂಕರವಾದ ಕುಷ್ಠರೋಗ ಉಂಟಾಯಿತು. ಇದರಿಂದಾಗಿ ಜೀವನದ ಬಗ್ಗೆ ಜಿಗುಪ್ಸೆ ತಾಳಿದ ಜನಮೇಜಯನ ಮೇಲೆ ಆತ್ರೇಯ ಋಷಿಯು ಕರುಣೆ ತಾಳಿ, ಗುರುವಾಯೂರು ಕೃಷ್ಣನನ್ನು ಪ್ರಸನ್ನ ಗೊಳಿಸುವಂತೆ ಹೇಳಿದನು. ಜನಮೇಜಯನು ಆತ್ರೇಯ ಋಷಿಯ ಸಲಹೆಯಂತೆ ಗುರುವಾಯೂರಿಗೆ ಹೋಗಿ ದೇವಾಲಯ ದಲ್ಲಿರುವ ಸಕಲ ರೋಗನಿವಾರಕನಾದ ಗುರವಾಯೂರಪ್ಪನಾದ ಶ್ರೀಕೃಷ್ಣನ ದರ್ಶನಮಾಡಿ ತನ್ನ ಕುಷ್ಠರೋಗವನ್ನು ಗುಣಪಡಿಸಿಕೊಂಡನು. ಅನನ್ಯ ಭಕ್ತಿಯಿಂದ ಮತ್ತು ಸೇವೆಯಿಂದ ಹಾಗೂ ದತ್ತಾತ್ರೇಯ ಯತಿಗಳ ಸಹಕಾರದಿಂದ, ಶ್ರೀಕೃಷ್ಣನ ಪರಮಾನುಗ್ರಹದಿಂದ ಜನಮೇಜಯನು ತನ್ನ ಖಾಯಿಲೆಯಿಂದ ಪಾರಾದನು. ಹೀಗೆ ಜನರ ಪ್ರಾಪಂಚಿಕ ಕಷ್ಟ ಕಾರ್ಪಣ್ಯಗಳನ್ನು ವಿಮುಕ್ತಿಗೊಳಿಸಲು ಮತ್ತು ಆಯುರಾರೋಗ್ಯ ಗಳನ್ನಿತ್ತು ಹರಸಲೆಂದೇ ವೈಕುಂಠನಾರಾಯಣನು ಗುರುವಾಯೂರಿನಲ್ಲಿ ನೆಲೆಸಿದ್ದಾನೆ.

ಗುರುವಾಯೂರು ಪುರಾಧೀಶನಾದ ಶ್ರೀಕೃಷ್ಣನ ಮಹಿಮೆಯನ್ನು ನಾವು, ಕೇರಳದ ಪ್ರಸಿದ್ಧಕವಿಯಾದ ಮೆಪ್ಪತ್ತೂರು ನಾರಾಯಣ ಭಟ್ಟಾದಿರಿಯಿಂದ ಸಂಸ್ಕೃತದಲ್ಲಿ ರಚಿತವಾದ ''ನಾರಾಯಣೀಯಮ್'' ಎಂಬ ಶ್ರೇಷ್ಠ ವಾದ ಗ್ರಂಥದಲ್ಲಿ ಕಾಣಬಹುದು. ''ನಾರಾಯಣೀಯಮ್'' ಪಾರಮಾರ್ಥಿಕ ವಿಚಾರಗಳನ್ನೊಳಗೊಂಡ ಭಾಗವತದ ಕಥೆಯೇ ಆಗಿದೆ. ದಶಾವತಾರದ ಸ್ತುತಿಯೇ ಇದರ ವಸ್ತು. ಇದು ಅತಿ ಮಹತ್ತರವಾದ ಜ್ಞಾನ ಮತ್ತು ಭಕ್ತಿಯಿಂದ ಕೂಡಿದ ಸ್ತೋತ್ರರತ್ನವಾಗಿದೆ. ಇದು ಭಕ್ತ ಮತ್ತು ಭಗವಂತನ ಬಾಂಧವ್ಯವನ್ನು ಹಾಗೂ ಇವರಿಬ್ಬರಲ್ಲಿನ ಅವಿನಾಭಾವವನ್ನು ಎತ್ತಿ ಹಿಡಿದಿರುವ ಭಕ್ತಿಕಾವ್ಯವೂ, ಮೇರುಕೃತಿಯೂ ಆಗಿದೆ.

ಅತಿ ಭಯಂಕರವಾದ ವಾತರೋಗದಿಂದ ನರಳುತ್ತಿದ್ದ ನಾರಾಯಣ ಭಟ್ಟಾದಿರಿಗೆ ಅದರ



ಶಮನ ಮಾಡಿಕೊಳ್ಳುವ ದಾರಿತೋಚದೆ, ಶ್ರೀಕೃಷ್ಣನನ್ನೇ ಅನನ್ಯವಾಗಿ ನಂಬಿ, ಅತಿ ಕಷ್ಟದಿಂದ ಗುರುವಾಯೂರಿಗೆ ಬಂದನು. ದೇವಸ್ಥಾನದ ಮಂಟಪದಲ್ಲಿ ಕುಳಿತು, ದಿನಕ್ಕೊಂದು ದಶಕದಂತೆ ನೂರು ದಿನಗಳ ಕಾಲ ಭಗವಂತನನ್ನು ಅವಿರತವಾಗಿ ಚಿಂತಿಸುತ್ತಾ, ಅವನ ಲೀಲಾವತಾರಗಳನ್ನು ವರ್ಣನೆಮಾಡುತ್ತಾ ತನ್ನ ದೈಹಿಕ ಮತ್ತು ಮಾನಸಿಕರೋಗಗಳನ್ನು ದೂರಮಾಡುವಂತೆ ಶ್ರೀಕೃಷ್ಣನಲ್ಲಿ ಮೊರೆ ಯಿಟ್ಟನು. ನೂರನೆಯದಿನ ಶ್ರೀಕೃಷ್ಣ ಪರಮಾತ್ಮನು ಅವನಿಗೆ ಕಾಣಿಸಿಕೊಂಡು ಅವನ ರೋಗಗಳನ್ನು ವಾಸಿಮಾಡಿದನು. ಈ ರೀತಿಯಾಗಿ ಮೆಪ್ಪತ್ತೂರು ನಾರಾಯಣ ಭಟ್ಟಾದಿರಿ ದಿನಕ್ಕೊಂದು ದಶಕದಂತೆ ಹಾಡಿದ ನೂರು ದಶಕಗಳೇ ಇಂದಿಗೂ ''ನಾರಾಯಣೀಯಮ್'' ಎಂದು ಪ್ರಸಿದ್ಧಿಪಡೆದಿರುವ ಮತ್ತು ಭಕ್ತ - ಭಗವಂತನ ಸಂಬಂಧವನ್ನು ತಿಳಿ ಕೊಟ್ಟಿರುವ ಶ್ರೀಮನ್ನಾರಾಯಣನ ದಿವ್ಯವಾ ಸ್ತೋತ್ರರತ್ನವಾಗಿದೆ. ಈ ಕೃತಿಯಲ್ಲಿ ಭಕ್ತಕವಿಯು ಭಗವಂತನನ್ನೇ ಸಂಬೋಧಿಸಿ ಪ್ರೀ ವಾತ್ಸಲ್ಯದಿಂದ ಕೇಳುವ ಪ್ರಶ್ನೆಗಳು ಭಕ್ತ ಹಾಗೂ ಭಗವಂತನ ಅವಿನಾಭಾವಕ್ಕೆ ಸಾಕ್ಷಿಯಾಗಿದೆ ಉದಾಹರಣೆಗೆ ಆತ್ಮೀಯತೆಯ ಪ್ರಶ್ನೆಗಳನ್ನೊ ಗೊಂಡ ಕೆಲವು ಸನ್ನಿವೇಶವನ್ನು ನೋಡೋಣ.

ವಾತನಾಥ, ತ್ರಿವಿಕ್ರಮನಾಗಿ ಬೆಳೆದ ನೀನು ಅಬ್ಬ! ಎರಡು ಹೆಜ್ಜೆಗಳಲ್ಲಿಯೇ ವಿಶ್ವವನು ಅಳೆದುಬಿಟ್ಟೆಯಲ್ಲ! ಗುರುವಾಯುಪುರನಾಥ ನರಸಿಂಹನಾಗಿ ಹಿರಣ್ಯಕಶಿಪುವನ್ನು ಕೊಂದು ಪ್ರಹ್ಲಾದನನ್ನು ರಕ್ಷಿಸಿದ್ದು ಹೇಗೆ ಹೇಳೋ ರಾಮನಾಗಿ ಎಷ್ಟು ಕಷ್ಟಪಟ್ಟೆ? ಕಾಳರಾತ್ರಿಯಲ್ಲಿ ಕೃಷ್ಣನಾಗಿ ಹುಟ್ಟಿ, ಆ ರಾತ್ರಿಯೇ ತಂದೆ - ತಾಯಿಯರಿಂದ ದೂರವಾಗಿ ಬಿಟ್ಟೆಯಲ್ಲ ಹೇಗಿದ್ದೆ ನೀನು?-ಹೀಗೆ ವಾತ್ಸಲ್ಯದಿಂದ ಕರುಣೆಯಿಂದ, ಪ್ರಾರ್ಥನೆಯ ಮೂಲಕ ಆರ್ತನಾಗಿ, ಜಿಜ್ಞಾಸುವಾಗಿ ಭಕ್ತನು ಸ್ನೇಹಿತನಂತೆ ನೇರವಾಗಿ ಭಗವಂತನನ್ನೇ ಪ್ರಶ್ನೆ ಕೇಳುವ ಮುಗ್ಧಮನಸ್ಸಿನ ಚಿತ್ರಣ ಸೊಗಸಾಗಿದೆ ಹಾಗೂ ಭಕ್ತಿ ಭಾವದಿಂದ ಕೂಡಿದೆ. ಇಂತಹ ''ನಾರಾಯಣೀಯಮ್'' ಎಂಬ ಅನರ್ಘ್ಯ ಸ್ತೋತ್ರವನ್ನು ಸಕಲರೂ ಹಾಡಿ, ಸ್ತುತಿಸಿ, ಪಾರಾಯಣಮಾಡಿ ಶ್ರೀಕೃಷ್ಣನ ಕೃಪಾಕಟಾಕ್ಷಕ್ಕೆ ಪಾತ್ರರಾಗಿ, ನಿರಂತರ ಸುಖವನ್ನು ಪಡೆಯಲು ನಾರಾಯಣ ಭಟ್ಟಾದಿರಿಯವರು ಸಹಾಯ ಮಾಡಿಕೊಟ್ಟಿರುತ್ತಾರೆ.

ಭಗವಂತನನ್ನು ಕಾಣಲು ಹಲವಾರು ದಾರಿಗಳುಂಟು. ಅವು ಕರ್ಮಮಾರ್ಗ, ಜ್ಞಾನಮಾರ್ಗ ಮತ್ತು ಭಕ್ತಿಮಾರ್ಗಗಳು. ಅವುಗಳಲ್ಲಿ ಅತಿಸುಲಭವಾದ ಭಕ್ತಿಮಾರ್ಗದಲ್ಲಿ ಸರ್ವಶಕ್ತನಾದ ಭಗವಂತನನ್ನು ಕಾಣಲು ಪ್ರಯತ್ನಿಸಬೇಕು. ಅದು ಕೇವಲ ನಾರಾಯಣೀಯಮ್ ಕಾವ್ಯರತ್ನದ ಪಾರಾಯಣ ದಿಂದ ಮಾತ್ರ ಸಾಧ್ಯ. ಇದರ ಪಾರಾಯಣದಿಂದ ವ್ಯಕ್ತಿ - ವ್ಯಕ್ತಿಗಳಲ್ಲಿ ಪ್ರೀತಿ, ವಾತ್ಸಲ್ಯ, ದಯೆ, ಸ್ನೇಹ ಮುಂತಾದ ಸದ್ಗುಣಗಳುಂಟಾಗಿ, ವ್ಯಕ್ತಿಯ ಮತ್ತು

ಸಮಾಜದ ಏಳ್ಗೆಯೂ ಉಂಟಾಗುತ್ತದೆ. ಈ ಕಾವ್ಯವನ್ನು ಸ್ತುತಿಸುವುದರಿಂದ ಮನುಷ್ಯನ ದೈಹಿಕ ಕ್ಲೇಶ ಮತ್ತು ಮನಸ್ಸಿನ ದುಗುಡ ಕಡಿಮೆಯಾಗಿ ಆಯುರಾರೋಗ್ಯ ಸೌಖ್ಯ ವುಂಟಾಗುತ್ತದೆ.

ಈಗ ನಾವು ''ನಾರಾಯಣೀಯಮ್'' ಕಾವ್ಯದಲ್ಲಿನ ಒಂದೆರಡು ಶ್ಲೋಕಗಳ ರುಚಿಯನ್ನು ಆಸ್ವಾದಿಸೋಣ. ಮೊದಲನೆಯ ಶ್ಲೋಕ ದಲ್ಲಿ ಗುರುವಾಯೂರುಪುರಪತಿಯಾದ ಶ್ರೀಮನ್ನಾರಾಯಣನ ಅನುಪಮ ಮಹಿಮೆಯ ದರ್ಶನವಿದ್ದು, ಇದು ಸಕಲ ಜನರ ಭಾಗ್ಯವಾಗಿದೆ ಎಂದು ವರ್ಣಿತವಾಗಿದೆ. ಈ ಭಾಗ್ಯಕ್ಕೆ ಸರಿಸಮನಾದದ್ದು ಮತ್ತೆಲ್ಲಿಯೂ ದೊರಕ ಲಾರದೆಂಬ ನಿತ್ಯ ಸತ್ಯವು ಇಲ್ಲಿ ವರ್ಣಿತವಾಗಿದೆ.

**ಸಾಂದ್ರಾನಂದಾವಬೋಧಾತ್ಮಕ**
**ಮನುಪಮಿತಂ ಕಾಲದೇಶಾವಧಿಭ್ಯಾಂ**
**ನಿರ್ಮುಕ್ತಂ ನಿತ್ಯಮುಕ್ತಂ ನಿಗಮ**
**ಶತಸಹಸ್ರೇಣ ನಿರ್ಭಾಸ್ಯಮಾನಮ್**
**ಅಸ್ಪಷ್ಟಂ ದೃಷ್ಟಮಾತ್ರೇ ಪುನರುರು**
**ಪುರುಷಾರ್ಥಾತ್ಮಕಂ ಬ್ರಹ್ಮತತ್ವಂ**
**ತತ್ತಾವದ್ಭಾತಿ ಸಾಕ್ಷಾದ್ಗುರುಪವನಪುರೇ**
**ಹಂತ ಭಾಗ್ಯಂ ಜನಾನಾಮ್**

ಘನೀ ಭೂತವಾದ ಆನಂದ ಮತ್ತು ಜ್ಞಾನ ಯಾರಸ್ವರೂಪವೋ, ಯಾರು ಉಪಮೆ ಯಿಲ್ಲದವನೋ, ಕಾಲ ದೇಶಗಳ ಅವಧಿಯಿಂದ ಯಾರು ನಿರ್ಮುಕ್ತನೋ, ನಿತ್ಯಮುಕ್ತನೋ, ನೂರು ಸಾವಿರ ವೇದ - ವಾಕ್ಯಗಳಿಂದ ಯಾರು ಪ್ರಕಾಶಿಸುವನೋ, ಯಾರು ಅಸ್ಪಷ್ಟನೋ, ಕೇವಲ ದರ್ಶನಮಾತ್ರದಿಂದ ಜೀವನದ ಮಹಾಪುರುಷಾರ್ಥವಾದ ಮೋಕ್ಷವನ್ನು ಕೊಡಬಲ್ಲನೋ, ಯಾರು ಬ್ರಹ್ಮತತ್ತ್ವವೋ, ಅವನು ಗುರುಪವನಪುರ (ಗುರುವಾಯೂರು) ದಲ್ಲಿ ಸಾಕ್ಷಾತ್ತಾಗಿ ವಿರಾಜಮಾನನಾಗಿದ್ದಾನೆ, ಓ! ಜನರ ಭಾಗ್ಯ ಎಷ್ಟೆಂದು ಹೇಳೋಣ.

ಎರಡನೆಯ ಶ್ಲೋಕದಲ್ಲಿ ಯಾರಿಗೂ ದೊರಕದೇ ಇರುವ ದುರ್ಲಭವಾದ ''ನಾರಾಯಣ'' ನೆಂಬ ವಸ್ತು ನಮಗೆ ದೊರಕಿರುವಾಗ ಸ್ಥಿರವಾದ ಮನಸ್ಸಿನಿಂದ ಅವನನ್ನು ಆಶ್ರಯಿಸೋಣವೆಂಬ ಮಾತು ವ್ಯಕ್ತವಾಗಿದೆ.

**ಏವಂ ದುರ್ಲಭ್ಯವಸ್ತುನ್ಯಪಿ**
**ಸುಲಭತಯಾ ಹಸ್ತಲಬ್ಧೇ ಯದನ್ಯತ್**
**ತನ್ವಾವಾಚಾ ಧಿಯಾ ವಾ ಭಜತಿ ಬತ ಜನಃ**
**ಕ್ಷುದ್ರ ತೈವ ಸ್ಫುಟೇಯಮ್**
**ಏತೇ ತಾವದ್ವಯಂ ತು ಸ್ಥಿರತರ**
**ಮನಸಾ ವಿಶ್ವಪೀಡಾಪಹತ್ಯೈ**
**ನಿಶ್ಶೇಷಾತ್ಮಾನಮೇನಂ ಗುರುಪವನ**
**ಪುರಾಧೀಶಮೇವಾಶ್ರಯಾಮಃ**

ಇಷ್ಟು ದುರ್ಲಭವಾದ ವಸ್ತು ನಮ್ಮ ಕೈಗೆ ಸುಲಭವಾಗಿ ದೊರಕಿರುವಾಗ ಅಯ್ಯೋ! ಜನರು ತಮ್ಮ ಶರೀರ, ಮಾತು, ಮನಸ್ಸುಗಳಿಂದ ಇತರರನ್ನು ಭಜಿಸುವರಲ್ಲಾ? ಇದು ಸಂಪೂರ್ಣವಾಗಿ ಅವರ ಕ್ಷುದ್ರಬುದ್ಧಿಯನ್ನು ಸ್ಪಷ್ಟಪಡಿಸುತ್ತದೆ. ಆದರೆ ನಾವು ಮಾತ್ರ ವಿಶ್ವದಲ್ಲಿರುವ ಸಮಸ್ತ ಪೀಡೆಗಳನ್ನೂ ನಾಶಗೊಳಿಸುವ ಸಲುವಾಗಿ ಅತ್ಯಂತ ಸ್ಥಿರವಾದ ಮನಸ್ಸಿನಿಂದ ಎಲ್ಲರ ಆತ್ಮಸ್ವರೂಪನಾದ ಗುರುಪವನಪುರಾಧೀಶನನ್ನು ಆಶ್ರಯಿಸೋಣ.

ಇಪ್ಪತ್ತೊಂದನೆಯ ಶ್ಲೋಕದಲ್ಲಿ ಯಾವ ಭಕ್ತರು ಭಾಗ್ಯಶಾಲಿಗಳು ಹಾಗೂ ಧನ್ಯರು ಎಂಬ ವಿಚಾರವು ಸ್ಫುಟವಾಗಿ ತಿಳಿದುಬರುತ್ತದೆ.

**ಪಠಂತೋ ನಾಮಾನಿ ಪ್ರಮದಭರ**
**ಸಿಂಧೌ ನಿಪತಿತಾಃ**
**ಸ್ಮರಂತೋ ರೂಪಂ ತೇ ವರದ**
**ಕಥಯಂತೋ ಗುಣಕಥಾಃ**
**ಚರಂತೋ ಯೇ ಭಕ್ತಾಸ್ತ್ವಯಿ**
**ಖಲು ರಮಂತೇ ಪರಮಮೂ-**
**ನಹಂ ಧನ್ಯಾನ್ ಮನ್ಯೇ**
**ಸಮಧಿಗತ - ಸಾರ್ವಾಭಿಲಷಿತಾನ್**

ಓ ವರದನೇ, ಯಾರು ನಿನ್ನ ನಾಮವನ್ನು ಪಠಿಸುವರೋ, ಯಾರು ನಿನ್ನ ರೂಪವನ್ನು ಸ್ಮರಿಸುತ್ತಾರೋ, ಯಾರು ಆನಂದಾತಿಶಯವಾದ ಸಾಗರದಲ್ಲಿ ಸದಾ ಮುಳುಗಿರುವರೋ, ಯಾರು ವಿರಕ್ತರಾಗಿ ಮನೆಮಠಗಳನ್ನು ತೊರೆದು ಸಂಚರಿಸುತ್ತಾ ನಿನ್ನಲ್ಲೇ ರಮಿಸುತ್ತಾರೋ, ಆ ಭಕ್ತರು ಮಾತ್ರ ಪರಮಭಾಗ್ಯಶಾಲಿಗಳೆಂದೂ, ಧನ್ಯರೆಂದೂ ನಾನು ಪರಿಗಣಿಸುತ್ತೇನೆ, ಏಕೆಂದರೆ ಸಮಸ್ತ ಈಪ್ಸಿತ ಪದಾರ್ಥಗಳೂ ಅವರ ಹಸ್ತಗತವಾಗಿಬಿಟ್ಟಿವೆ.

'ನಾರಾಯಣೀಯಮ್'ನ ಇಪ್ಪತ್ತೇಳನೆಯ ಶ್ಲೋಕವು ಮಾನವನ ಯಾವ ಯಾವ ಅಂಗಗಳು ಯಾವ ಯಾವ ಕಾರ್ಯಗಳನ್ನು ಮಾಡಿ ಪುನೀತಗೊಳ್ಳಬೇಕೆಂಬ ಅಂಶವನ್ನು ವರ್ಣಿಸಿದೆ.

**ವಿಧೂಯಕ್ಲೇಶಾನ್ ಮೇ ಕುರು**
**ಚರಣಯುಗ್ಮಂ ಧೃತರಸಂ**
**ಭವತ್ ಕ್ಷೇತ್ರಪ್ರಾಪ್ತೌ ಕರಮಪಿ ಚ**
**ತೇ ಪೂಜನ ವಿಧೌ**
**ಭವನ್ಮೂರ್ತ್ಯಾಲೋಕೇ**
**ನಯನಮಥ ತೇ ಪಾದತುಲಸೀ-**
**ಪರಿಘ್ರಾಣೇ ಘ್ರಾಣಂ**
**ಶ್ರವಣಮಪಿ ತೇ ಚಾರು ಚರಿತೇ**

ಹೇ ಭಗವನ್, ನನ್ನ ಕ್ಲೇಶಗಳೆಲ್ಲವನ್ನೂ ತೊಡೆದು ಹಾಕಿ ನನ್ನ ಪಾದಗಳು ನಿನ್ನ ಕ್ಷೇತ್ರವನ್ನು ಪ್ರವೇಶಿಸುವಂತೆ, ನನ್ನ ಕೈಗಳು ನಿನ್ನ ಪೂಜೆಯನ್ನು ಮಾಡುವಂತೆ, ನನ್ನ ಕಣ್ಣುಗಳು ನಿನ್ನ ದಿವ್ಯಮೂರ್ತಿಯನ್ನು ನೋಡುವಂತೆ, ನನ್ನ ನಾಸಿಕ ನಿನ್ನ ಪಾದಗಳಲ್ಲಿರುವ ತುಲಸಿಯನ್ನು ಆಘ್ರಾಣಿಸುವಂತೆ, ನನ್ನ ಕಿವಿಗಳು ನಿನ್ನ ದಿವ್ಯ ಸುಂದರ ಚರಿತೆಯನ್ನು ಕೇಳುವಂತೆ ಮಾಡು.

ಇಪ್ಪತ್ತೆಂಟನೆಯ ಶ್ಲೋಕದಲ್ಲಿ ಪರಮಾತ್ಮನ ದಿವ್ಯದರ್ಶನದಿಂದ ಎಲ್ಲ ಉಪದ್ರವಗಳೂ ನಾಶವಾಗಿ, ಮರೆಯುವಂತಾಗಲಿ ಎಂಬ ಉಕ್ತಿ ವೇದ್ಯವಾಗಿದೆ.

**ಪ್ರಭೂತಾದಿವ್ಯಾಧಿಪ್ರಸಭ**
**ಚಲಿತೇ ಮಾಮಕಹೃದಿ**
**ತ್ವದೀಯಂ ತದ್ರೂಪಂ ಪರಮ ಸುಖ**
**ಚಿದ್ರೂಪಮುದಿಯಾತ್**
**ಉದಂಚದ್ರೋಮಾಂಚೋ**
**ಗಲಿತ ಬಹುಹರ್ಷಾಶ್ರು ನಿವಹೋ**
**ಯಥಾ ವಿಸ್ಮರ್ಯಾಸಂ**
**ದುರುಪಶಮ ಪೀಡಾಪರಿಭವಾನ್**

ಹೇ ಪ್ರಭೂ, ಪರಮಾನಂದವೂ ಮತ್ತು ಚಿತ್‌ಜ್ಞಾನ ಸ್ವರೂಪವೂ ಆದ ನಿನ್ನ ರೂಪ ಅತಿ ಭಯಂಕರವಾದ ಆದಿವ್ಯಾಧಿಗಳಿಂದ ವಿಚಲಿತ ವಾದ ನನ್ನ ಹೃದಯದಲ್ಲಿ ಮೂಡಿ, ನನ್ನ ಶರೀರ ರೋಮಾಂಚಿತವಾಗಿ ಹರ್ಷದಿಂದ ಮೂಡಿದ ಆನಂದಭಾಷ್ಪ ಧಾರಾಕಾರವಾಗಿ ಹರಿಯುತ್ತಾ ದುರ್ದಮನೀಯವಾದ ಪೀಡೆಯಿಂದ

ಉಂಟಾದ ಉಪದ್ರವಗಳನ್ನು ನಾನು ಮರೆಯುವಂತಾಗಲಿ.

ಇನ್ನೂರ ಐವತ್ತೊಂಬತ್ತನೆಯ ಶ್ಲೋಕದಲ್ಲಿ ಪ್ರಹ್ಲಾದನನ್ನು ರಕ್ಷಿಸಿ, ಅವನಿಗೆ ವರವನ್ನಿತ್ತು ಹರಸಿದ ಶ್ರೀಮನ್ನಾರಾಯಣನನ್ನು ''ಪ್ರಹ್ಲಾದ ಪ್ರಿಯ'', ''ಪ್ರಹ್ಲಾದವರದ'' ಎಂಬುದಾಗಿ ಕೀರ್ತಿಸಿದೆ. ಭಕ್ತಿಗೆ ಸಂದ ಬೆಲೆ ಭಗವಂತನ ಸಾಕ್ಷಾತ್ಕಾರ ಎಂಬುದು ವಿದಿತವಾಗಿದೆ.

**ಏವಂ ನಾಟಿತ ರೌದ್ರಚೇಷ್ಟಿತ**
**ವಿಭೋ ಶ್ರೀತಾಪನೀಯಾಭಿಧ**
**ಶ್ರುತ್ಯಂತ ಸ್ಫುಟಗೀತ ಸರ್ವ**
**ಮಹಿಮನ್ನತ್ಯಂತ ಶುದ್ಧಾಕೃತೇ**
**ತತ್ತಾದೃಙ್ ನಿಖಿಲೋತ್ತರಂ**
**ಪುನರಹೋ ಕಸ್ತ್ವಾಂ ಪರೋ ಲಂಘಯೇತ್**
**ಪ್ರಹ್ಲಾದಪ್ರಿಯ ಹೇ ಮರುತ್ಪುರಪತೇ**
**ಸರ್ವಾಮಯಾತ್ ಪಾಹಿಮಾಮ್**

ಹೇ ವಿಭೋ, ರೌದ್ರಕೃತ್ಯದಿಂದ ನಟನೆ ಮಾಡಿದವನೇ, ಅತ್ಯಂತ ಶುದ್ಧ ಆಕೃತಿ ಯುಳ್ಳವನೇ, ಪವಿತ್ರವಾದ ತಾಪನೀಯಾ ಉಪನಿಷತ್ತಿನಲ್ಲಿ ಸರ್ವಮಹಿಮೆಗಳಿಂದಲೂ ಹಾಡಲ್ಪಟ್ಟವನೇ, ಎಲ್ಲರಿಗೂ ಶ್ರೇಷ್ಠನೂ ಮತ್ತು ಅಪ್ರಮೇಯನೂ ಆದವನೇ, ನಿನಗೆ ಮತ್ತಾರು ಎಣೆ! ಓ ಪ್ರಹ್ಲಾದಪ್ರಿಯನಾದ ಮರುತ್ಪುರ ಪತಿಯಾದ ಕೃಷ್ಣನೇ, ನನ್ನನ್ನು ಎಲ್ಲ ರೋಗ ಗಳಿಂದಲೂ ರಕ್ಷಿಸು.

ಹೀಗೆ ಗುರುವಾಯೂರಿನಲ್ಲಿ ಶ್ರೀಕೃಷ್ಣನೇ ತಾನು ಪ್ರಹ್ಲಾದವರದ ಮತ್ತು ಭಕ್ತವರದ ಎಂದು ಘೋಷಿಸಿ, ತನ್ನ ಭಕ್ತರನ್ನು ಕಾಪಾಡುತ್ತೇನೆಂಬ ಭರವಸೆಯನ್ನಿತ್ತಿದ್ದಾನೆ.

ಮುಂದಿನ ಶ್ಲೋಕದಲ್ಲಿ ಬಾಲಕೃಷ್ಣನ ವರ್ಣನೆಯನ್ನು ಕಾಣುತ್ತೇವೆ. ಕಿಶೋರವೇಷದ ವರ್ಣನೆ ಅತಿ ಸುಂದರವಾಗಿದೆ.

**ಅಗ್ರೇಪಶ್ಯಾಮಿ ತೇಜೋ ನಿಬಿಡತರ**
**ಕಲಾಯಾವಲಿ ಲೋಭನೀಯಂ**
**ಪೀಯೂಷಾ ಪ್ಲಾವಿತೋಹಂ ತದನು**
**ತದುದರೇ ದಿವ್ಯ ಕೈಶೋರವೇಷಮ್**
**ತಾರುಣ್ಯಾರಂಭ ರಮ್ಯಂ ಪರಮಸುಖ**
**ರಸಾಸ್ವಾದ ರೋಮಾಂಚಿತಾಂಗೈ**
**ರಾವೀತಂ ನಾರದಾದ್ಯೈರ್ವಿಲಸ**
**ದುಪನಿಷತ್ಸುಂದರೀ ಮಂಡಲೈಶ್ಚ**

ನಿಬಿಡತರವಾದ ಕಳಾಯ ಪುಷ್ಪಗುಚ್ಛಗಳಿಂದ ತುಂಬಿದ ಹಾರದಂತೆ ಕಂಗೊಳಿಸುತ್ತಿರುವ ಪ್ರಭಾಮಂಡಲವನ್ನು ನಾನು ಮುಂದೆ ಕಾಣುತ್ತಿರುವೆ.ಹೀಗಾಗಿ ನಾನು ಪರಮಾನಂದ ಸಾಗರದಲ್ಲಿ ನಿಮಗ್ನನಾಗಿರುವೆ. ಮತ್ತು ಅದರೊಳಗೆ ಆಗ ತಾನೇ ತಾರುಣ್ಯಕ್ಕೆ ಕಾಲಿಟ್ಟಿರುವ ರಮ್ಯವಾದ ಪರಮ ರಸಾಸ್ವಾದದಿಂದ ರೋಮಾಂಚಿತರಾದ ನಾರದಾದಿಗಳಿಂದ ಆವರಿಸಲ್ಪಟ್ಟು ಮತ್ತು ಉಪನಿಷತ್ತುಗಳೆಂಬ ಸುಂದರಿಯರ ಮಂಡಲದಿಂದ ಸಮಾವೃತವಾದ ದಿವ್ಯ ಕಿಶೋರ ವೇಷದಿಂದ ಕಂಗೊಳಿಸುತ್ತಿರುವ ಬಾಲನನ್ನು ನಾನು ಕಾಣುತ್ತಿರುವೆನು.

ಒಂದು ಶ್ಲೋಕದಲ್ಲಿ ಇಡೀ ಪ್ರಪಂಚವನ್ನೇ ಆನಂದಗೊಳಿಸುತ್ತಿರುವ ಕೃಷ್ಣನ ಕರುಣಾಪೂರ್ಣ ನೇತ್ರವೃಷ್ಟಿಯನ್ನು ಭಕ್ತರ ಮೇಲೆ ಬೀರುವಂತೆ ಚಿತ್ರಿಸಿದೆ.

**ಹೃದ್ಯಂ ಪೂರ್ಣಾನುಕಂಪಾರ್ಣವ**
**ಮೃದುಲಹರೀ ಚಂಚಲಭ್ರೂ ವಿಲಾಸೈ:**
**ಆನೀಲಸ್ನಿಗ್ಧ ಪಕ್ಷ್ಮಾವಲಿ ಪರಿಲಸಿತಂ**
**ನೇತ್ರಯುಗ್ಮಂ ವಿಭೋ ತೇ**
**ಸಾಂದ್ರಚ್ಛಾಯಂ ವಿಶಾಲಾರುಣ**
**ಕಮಲದಲಾಕಾರ ಮಾಮುಗ್ಧತಾರಂ**
**ಕಾರುಣ್ಯಾಲೋಕಲೀಲಾ ಶಿಶಿರಿತ**
**ಭುವನಂ ಕ್ಷಿಪ್ಯತಾಂ ಮಯ್ಯನಾಥೇ**

ಪೂರ್ಣಾನುಕಂಪವೆಂಬ ಸಾಗರದಲ್ಲಿ ಮೃದುಲಹರಿಯಂತೆ ಚಂಚಲವಾದ ಭ್ರೂವಿಲಾಸದಿಂದ ಮನೋಹರವಾಗಿಯೂ, ಅತ್ಯಂತ ನೀಲಿಯೂ ಸ್ನಿಗ್ಧವೂ ಆದ ಫಲಕಗಳಿಂದ ಸುಶೋಭಿತವಾಗಿಯೂ ಮತ್ತು ಘನೀಭೂತ ವಾದ ಛಾಯೆಯಿಂದ ಸಂಯುಕ್ತವಾದದ್ದೂ, ವಿಶಾಲವಾದ ಕೆಂಪು ತಾವರೆಯ ದಳದಂತೆ ಇರುವುದೂ, ಪ್ರಿಯವಾದ ಕಣ್ಣುಗುಡ್ಡೆಗಳಿಂದ ಕೂಡಿರುವುದೂ, ಕರುಣಾ ಪೂರ್ಣವಾದ ಅವಲೋಕನದಿಂದ ಇಡೀ ವಿಶ್ವವನ್ನು ಶಾಂತ ಗೊಳಿಸುತ್ತಾ ಆನಂದಗೊಳಿಸುತ್ತಾ ಇರುವ ನಿನ್ನ ನೇತ್ರಯುಗ್ಮದ ದೃಷ್ಟಿಯನ್ನು ಅಸಹಾಯನಾದ, ಅನಾಥನಾದ ನನ್ನ ಮೇಲೆ ಬೀರು.

ಇನ್ನೊಂದು ಶ್ಲೋಕದಲ್ಲಿ ಭಕ್ತರ ಅಭೀಷ್ಟಗಳನ್ನು ಪೂರೈಸುವ ಕಾರುಣ್ಯ ಸಿಂಧುವಾದ ಶ್ರೀಕೃಷ್ಣನ ಪಾದಮೂಲಗಳು ನನ್ನ ಹೃದಯದಲ್ಲಿ ನೆಲೆನಿಲ್ಲಲಿ ಎಂಬ ವಿಚಾರವನ್ನು ಕಾಣುತ್ತೇವೆ.

**ಯೋಗೀಂದ್ರಾಣಾಂ ತ್ವದಂಗೇಷ್ವಧಿಕ**
**ಸುಮಧುರಂ ಮುಕ್ತಿಭಾಜಾಂ ನಿವಾಸೋ**
**ಭಕ್ತಾನಾಂ ಕಾಮವರ್ಷದ್ಯುತರುಕಿಸಲಯಂ**
**ನಾಥ ತೇ ಪಾದಮೂಲಮ್**
**ನಿತ್ಯಂ ಚಿತ್ತಸ್ಥಿತಂ ಮೇ ಪವನ**
**ಪುರಪತೇ ಕೃಷ್ಣ ಕಾರುಣ್ಯಸಿಂಧೋ**
**ಹೃತ್ವಾ ನಿಶ್ಶೇಷತಾಪಾನ್ ಪ್ರದಿಶತು**
**ಪರಮಾನಂದ ಸಂದೋಹ ಲಕ್ಷ್ಮೀಮ್**

ನಿನ್ನ ಎಲ್ಲ ಅಂಗಗಳಿಗಿಂತಲೂ, ಯೋಗೀಂದ್ರರಿಗೆ ಅಧಿಕ ಸುಮಧುರವಾದ ಭಕ್ತರಿಗೆ ಮುಕ್ತಿಯನ್ನು ಪಡೆದವರಿಗೆ ಆಶ್ರಯಸ್ಥಾನವಾದ, ಭಕ್ತರಿಗೆ ತಮ್ಮ ಅಭೀಷ್ಟಗಳನ್ನು ನೆರವೇರಿಸುವಂತಹ ಕಲ್ಪತರುವಿನ ಚಿಗುರಿನಂತಿರುವ ನಿನ್ನ ಪಾದಮೂಲಗಳು, ಹೇ ಕೃಷ್ಣಾ, ಹೇ ಕಾರುಣ್ಯ ಸಿಂಧುವೇ, ಹೇ ಪವನಪುರಪತಿಯೇ, ಸದಾ ನನ್ನ ಹೃದಯದಲ್ಲಿ ಸ್ಥಿತವಾಗಿದ್ದು, ನನ್ನ ತಾಪಗಳನ್ನು ನಿಶ್ಶೇಷವಾಗಿ ಪರಿಹರಿಸಿ ಪರಮಾನಂದ ಸಂದೋಹ ಲಕ್ಷ್ಮಿಯಾದ ಮೋಕ್ಷವನ್ನು ನನಗೆ ಕರುಣಿಸಲಿ.

ಶ್ರೀಮನ್ನಾರಾಯಣನು, ಇಹದಲ್ಲಿ ಎಲ್ಲರಿಗೂ ಆಯುರಾರೋಗ್ಯ ಸೌಖ್ಯವನ್ನಿತ್ತು, ಕೊನೆಯಲ್ಲಿ ಮುಕ್ತಿಯನ್ನು ಕರುಣಿಸಲಿ ಎಂಬ ಉನ್ನತ ಸತ್ಯವನ್ನು ಮುಂದಿನ ಶ್ಲೋಕದಲ್ಲಿ ಕಾಣಬಹುದು.

**ಅಜ್ಞಾತ್ವಾ ತೇ ಮಹತ್ವಂ ಯದಿಹ**
**ನಿಗದಿತಂ ವಿಶ್ವನಾಥ ಕ್ಷಮೇಥಾಃ**
**ಸ್ತೋತ್ರಂ ಚೈತತ್ಸಹಸ್ರೋತ್ತರ ಮಧಿಕ ತರಂ**



**ಕಾಮಿತವೀಯೋ ಕರುಣಾಕರನೆ.**

ತ್ವತ್ ಪ್ರಸಾದಾಯ ಭೂಯಾತ್
ದ್ವೇಧಾ ನಾರಾಯಣೀಯಂ ಶ್ರುತಿಷು ಚ
ಜನುಷಾ ಸ್ತುತ್ಯತಾವರ್ಣನೇನ
ಸ್ಫೀತಂ ಲೀಲಾವತಾರೈರಿದಮಿಹ
ಕುರುತಾಮಾಯುರಾರೋಗ್ಯ ಸೌಖ್ಯಮ್

ನಿನ್ನ ಮಹತ್ವವನ್ನರಿಯದೆ ಇದರಲ್ಲಿ ನನ್ನಿಂದ ಏನೇನು ಹೇಳಲ್ಪಟ್ಟಿದೆಯೋ ಅದೆಲ್ಲವನ್ನೂ ಕ್ಷಮಿಸು. ಸಾವಿರಕ್ಕಿಂತಲೂ ಹೆಚ್ಚು ಶ್ಲೋಕಗಳಿಂದ ಕೂಡಿದ ಈ ಸ್ತೋತ್ರವು ನಿನ್ನನ್ನು ಅಧಿಕತರವಾಗಿ ಪ್ರಸನ್ನಗೊಳಿಸುವಂತಾಗಲಿ, ವೇದಗಳಲ್ಲಿ ಹುಟ್ಟಿದ ಲೀಲಾವತಾರಗಳಿಂದ ವರ್ಧಿಸಿದ ಸ್ತುತಿಗಳಲ್ಲಿ ವರ್ಣಿಸಿದ ನಾರಾಯಣ ವಿಷಯಕವೂ ನಾರಾಯಣ ಭಟ್ಟನಿಂದ ವಿರಚಿತವೂ ಆದ ಎರಡು ಅರ್ಥಗಳಿಂದ ಕೂಡಿದ ನಾರಾಯಣೀಯವು, ಹೇ ವಿಶ್ವನಾಥ! ಈ ಜಗತ್ತಿನಲ್ಲಿ ಹೇಳುವವರಿಗೆ - ಕೇಳುವವರಿಗೆ ಆಯುರಾರೋಗ್ಯ ಸೌಖ್ಯವನ್ನೂ, ಕೊನೆಯಲ್ಲಿ ಮುಕ್ತಿಯನ್ನೂ ಕರುಣಿಸಲಿ.

ಇಂತಹ ಕೃಷ್ಣಮಹಿಮೆಯನ್ನೊಳಗೊಂಡ ಈ ''ನಾರಾಯಣೀಯಮ್'' ಗ್ರಂಥರಚನಾಕಾರರಾದ ನಾರಾಯಣ ಭಟ್ಟಾದಿರಿಗೆ ವೃಶ್ಚಿಕ ಏಕಾದಶಿಯಂದು ಶ್ರೀಕೃಷ್ಣನ ಸಾಕ್ಷಾತ್ಕಾರವಾಯಿತು. ಸರ್ವಜ್ಞನೂ, ಸರ್ವಶಕ್ತನೂ ಆದ ಕೃಷ್ಣಪರಮಾತ್ಮನು ಪರಮಭಕ್ತನಾದ ನಾರಾಯಣ ಭಟ್ಟಾದಿರಿಯ ವಾತರೋಗವನ್ನು ವಾಸಿ ಮಾಡಿದನು. ಭಗವಂತನ ಅನನ್ಯ ಕೃಪೆಗೆ ಒಳಗಾದ ಮಹಾಕವಿ ಭಗವಂತನನ್ನು ಕಂಡು, ಆ ದಿವ್ಯಪ್ರಭೆಯನ್ನು ಕುರಿತು ಹಾಡಿದ ಮತ್ತು ಶ್ರೀಕೃಷ್ಣನ ವಿವಿಧ ಲೀಲಾವಿನೋದಗಳನ್ನು ಕುರಿತು ಬರೆದ. ಇತರರೂ ಸಹ ಈ ''ನಾರಾಯಣೀಯಮ್'' ಕಾವ್ಯ ಪಠಣ ಮತ್ತು ಶ್ರವಣದಿಂದ ತಮ್ಮ ನೋವನ್ನು ನಿವಾರಿಸಿಕೊಳ್ಳಲಿ ಎಂದು ಆಶಿಸಿದ. ಈ ಕಾವ್ಯವು ರಸಸ್ಯಂದಿಯಾಗಿ ಓದುಗರ ನಾಲಿಗೆಗೆ ರುಚಿ, ಮನಸ್ಸಿಗೆ ಶಾಂತಿ ಹಾಗೂ ದೇಹಕ್ಕೆ ಕಾಂತಿಯ ಕೊಡುಗೆಯಾಗಿದೆ. ಗುರುವಾಯೂರು ದೇವಾಲಯದ ಪ್ರಾಕಾರದ ಸುತ್ತಲೂ ಎಲ್ಲ ಭಕ್ತರೂ ''ನಾರಾಯಣೀಯಮ್'' ಪುಸ್ತಕ ಪಠಣ ಮಾಡುತ್ತಿರುತ್ತಾರೆ. ಶ್ರೀಕೃಷ್ಣನ ದರ್ಶನ - ನಯನ ಮನೋಹರ ಹಾಗೂ ನಾರಾಯಣೀಯಮ್ ನ ಶ್ರವಣ - ಕರ್ಣಾಮೃತವಾಗಿ ಮಾನವನ ಜನ್ಮಸಾರ್ಥಕತೆಗೆ ಗುರುವಾಯೂರು ಕೇಂದ್ರಬಿಂದುವಾಗಿದೆ.

ಈ ರೀತಿಯಾಗಿ ''ನಾರಾಯಣೀಯಮ್'' ಗ್ರಂಥದಲ್ಲಿ ವರ್ಣಿತವಾಗಿರುವ ಗುರುವಾಯೂರು ಶ್ರೀಕೃಷ್ಣನ ಕೆಲವು ಮಹಿಮಾ ವಿಚಾರಗಳನ್ನು ಅರಿತುಕೊಂಡ ಬಳಿಕ, ಆ ದೇವಾಲಯದಲ್ಲಿರುವ ಇತರ ದೇವತೆಗಳು, ಪೂಜಾ ವಿಧಿ - ವಿಧಾನಗಳು, ಹಿಂದೆ ಸಂಭವಿಸಿದ ಒಂದೆರಡು ಘಟನೆಗಳ ಪರಿಚಯ ಮಾಡಿ ಕೊಳ್ಳೋಣ. ಗುರುವಾಯೂರು ದೇವಾಲಯದ ಪ್ರಾಕಾರದ ಸುತ್ತಲೂ ಗಣಪತಿ, ಅಯ್ಯಪ್ಪ, ಶೇಷಶಾಯಿಯಾದ ಪದ್ಮನಾಭ, ಲಕ್ಷ್ಮೀನರಸಿಂಹ, ಆಂಜನೇಯ, ವೇಣುಗೋಪಾಲ, ಭಗವತಿ, ದಶಾವತಾರ ವಿಗ್ರಹಗಳು ಮುಂತಾದ ದೇವರುಗಳಿವೆ. ಪ್ರಾಕಾರದಿಂದ ಮುಂದೆ ಒಳಗೆ ಹೋಗುವಾಗ ಛಾವಣಿಯ ಮೇಲೆ ನವಗ್ರಹಗಳ ಕೆತ್ತನೆ ಇದೆ. ದೇವಾಲಯದ ಪ್ರಾಕಾರದ ಸುತ್ತಲೂ ಭಕ್ತರು ''ನಾರಾಯಣೀಯಮ್'' ಕಾವ್ಯವನ್ನು ಅನನ್ಯವಾಗಿ ಪಾರಾಯಣಮಾಡುತ್ತಿರುತ್ತಾರೆ. ಅನ್ನಪ್ರಾಶನ, ತುಲಾಭಾರ, ಹರಕೆ ಒಪ್ಪಿಸುವ ಕಾರ್ಯಕ್ರಮಗಳು ಅವಿರತವಾಗಿ ನಡೆಯುತ್ತಿರುತ್ತವೆ. ಒಂದು ದೊಡ್ಡದಾದ ಪರಾತದಲ್ಲಿಟ್ಟಿರುವ ಗುಲಗಂಜಿಯೊಡನೆ ಪುಟ್ಟಮಕ್ಕಳು ಆಡಿ, ಹಾಡಿ ನಲಿಯುತ್ತಿರುತ್ತಾರೆ. ಭಕ್ತಾದಿಗಳು ಗುರುವಾಯೂರಪ್ಪನಿಗೆ 'ಉದಯಾಸ್ತಮಾನಪೂಜೆ,' 'ಶುತ್ತುವಿಳಕ್ಕು ಸೇವೆ' (ಪ್ರಾಕಾರದಸುತ್ತ ದೀಪವಿಟ್ಟು ಸೇವೆ) ಮಾಡಿಸಿ ಪುನೀತರಾಗಬಹುದು. ಪ್ರಸಾದ ರೂಪವಾಗಿ ಶ್ರೀಗಂಧ, ಶ್ರೀಕೃಷ್ಣನಿಗೆ ಅಭಿಷೇಕಮಾಡಿದ ಎಳ್ಳೆಣ್ಣೆ, ಹಾಲಿನ ಪಾಯಸ ಕೊಡುತ್ತಾರೆ. ಇಲ್ಲಿ ದೊರೆಯುವ ಪ್ರಸಾದರೂಪವಾದ ಎಣ್ಣೆಯು ''ಔಷಧಿ ಎಣ್ಣೆ''ಯೆಂದೇ ಪ್ರಸಿದ್ಧಿಯಾಗಿ ಭಕ್ತರ ಖಾಯಿಲೆ, ನೋವುಗಳನ್ನು ಪರಿಹರಿಸುತ್ತದೆಂಬ ಅನನ್ಯ ನಂಬಿಕೆಯಿದೆ.

ಕೆಲವು ವೇಳೆ ದೇವಾದಿದೇವತೆಗಳು ಗರ್ಭಗುಡಿಯೊಳಗೆ ಕೃಷ್ಣನನ್ನು ಪೂಜೆ ಮಾಡುತ್ತಿರುತ್ತಾರೆಂದು, ಆ ಸಮಯದಲ್ಲಿ ಮೂಲವಿಗ್ರಹವಾದ ವೈಕುಂಠನಾರಾಯಣನ ದರ್ಶನ ಯಾರಿಗೂ ಲಭ್ಯವಾಗುವುದಿಲ್ಲ. ಗರ್ಭಗುಡಿಯ ಬಾಗಿಲನ್ನು ಮುಚ್ಚಿಬಿಡುತ್ತಾರೆ. ಆ ವೇಳೆಯಲ್ಲಿ ಉತ್ಸವಮೂರ್ತಿಯನ್ನು ಆನೆಯ ಮೇಲೆ ಕುಳ್ಳಿರಿಸಿ, ಅಪಾರವಾದ ವಾದ್ಯ ವಿಶೇಷಗಳೊಡನೆ, ಅನೇಕಾನೇಕ ದೀಪಗಳನ್ನು ಹಿಡಿದ ದೇವಾಲಯದ ಕಾರ್ಯಕರ್ತರ ಸಮೂಹದೊಂದಿಗೆ ಮತ್ತು ''ಹರೇ ರಾಮ ಹರೇಕೃಷ್ಣ ಕೃಷ್ಣಕೃಷ್ಣ ಹರೇ ಹರೇ'' ಎಂಬ ಭಜನೆಯ ಭಕ್ತಸಮೂಹದೊಂದಿಗೆ ಶ್ರೀಕೃಷ್ಣನ ಉತ್ಸವವು ದೇವಾಲಯದ ಪ್ರಾಕಾರದ ಸುತ್ತಲೂ ಮೂರು ಪ್ರದಕ್ಷಿಣೆ ಬರುತ್ತದೆ. ಇದನ್ನು ''ಶ್ರೀಬಲಿ'' ಅಥವಾ ಶ್ರೀವೇಲಿ ಎನ್ನುತ್ತಾರೆ. ಆಗ ಗುರುವಾಯೂರಪ್ಪನು ಗರ್ಭಗುಡಿಯ ಹೊರಗೆ ಪ್ರಾಕಾರದಲ್ಲಿರುವ ತನ್ನ ಬಳಗದವರನ್ನು ನೋಡಿ ರಕ್ಷಿಸುತ್ತಾನೆ ಮತ್ತು ತನ್ನ ಬಂಟರಿಗೆ ಬಲಿ ಪೂಜೆ ಹಾಕಿಸುತ್ತಾನೆ ಎಂಬ ಪ್ರತೀತಿ ಇದೆ. ಈ ಉತ್ಸವವನ್ನು ನೋಡಲು ಎರಡು ಕಣ್ಣು ಸಾಲದೆನಿಸುತ್ತದೆ. ಇದು ದಿನವೂ ಬೆಳಗ್ಗೆ ಮತ್ತು ರಾತ್ರಿ ಎರಡು ವೇಳೆಯೂ ನಡೆಯುವ ''ಶ್ರೀವೆಲಿ'' ಉತ್ಸವವಾಗಿದೆ. ಉತ್ಸವ ಮುಗಿದನಂತರ ಜನರಿಗೆ ಮೂಲ ದೇವರ ದರ್ಶನವನ್ನು ಮಾಡಲು ಬಿಡುತ್ತಾರೆ.

ಗುರುವಾಯೂರಿಗೆ ಅತ್ಯಂತ ಸಮೀಪದಲ್ಲಿಯೇ ಇರುವ ಮಮ್ಮಿಯೂರಿನಲ್ಲಿ ಶಿವ - ಪಾರ್ವತಿ, ವಿಷ್ಣು, ಗಣಪತಿ, ಶಂಕರಾಚಾರ್ಯರು, ಸುಬ್ರಹ್ಮಣ್ಯ, ನಾಗವನ, ಮುಂತಾದ ದೇವರುಗಳಿದ್ದು, ಅತ್ಯಂತ ರಮ್ಯವಾದ ಸ್ಥಳವಾಗಿದೆ. ಗುರುವಾಯೂರಿನಲ್ಲಿ ಶ್ರೀಕೃಷ್ಣನ ದೇವಾಲಯವಲ್ಲದೆ, ಪಾರ್ಥಸಾರಥಿ, ತಿರುವೆಂಕಟಾಚಲಪತಿ, ಭಗವತಿ, ಸರಸ್ವತಿ, ಗಣಪತಿ, ಅಯ್ಯಪ್ಪ ಮತ್ತು ರಾಮಾನುಜಾಚಾರ್ಯರ ದೇವಾಲಯಗಳೂ ಇವೆ. ಇವು ಪ್ರಶಾಂತವಾದ ಸ್ಥಳದಲ್ಲಿದ್ದು ಭಕ್ತರ ಮನಸ್ಸಿಗೆ ಶಾಂತಿ ಹಾಗೂ ನೆಮ್ಮದಿಯನ್ನು ಕೊಡುತ್ತದೆ.

ಆದಿಗುರು ಶಂಕರರು ಒಮ್ಮೆ ನಾರದರೊಡನೆ ಒಂದು ಏಕಾದಶಿಯಂದು ಪ್ರಯಾಣಿಸುತ್ತಿದ್ದಾಗ ಗುರುವಾಯೂರು ತಲುಪಿದಾಗ್ಯೂ ಕೂಡ,

## ಸಪ್ತಗಿರಿ

### ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಪ್‌ಲ್‌ಸ್ಕೇಪು ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು,**

ಸಪ್ತಗಿರಿ,
ತಿ. ತಿ. ದೇವಸ್ಥಾನಗಳು, ತಿರುಪತಿ - 517507,
ಚಿತ್ತೂರು ಜಿಲ್ಲೆ ಆಂ.ಪ್ರ.

ಕೃಷ್ಣನ ದರ್ಶನಮಾಡದೆ ಮುಂದೆ ಹೋದರು. ಕೇವಲ ಒಂದೆರಡು ಅಡಿಗಳ ಪ್ರಮಾಣ ಮುಂದುವರಿದಿರಬಹುದು. ಅಷ್ಟರಲ್ಲಿ ಶಂಕರರು ದಡಕ್ಕೆಂದು ಬಿದ್ದರು. ತಕ್ಷಣವೇ ತಮ್ಮ ತಪ್ಪನ್ನು ಕ್ಷಮಿಸುವಂತೆ ಶಂಕರರು ಶ್ರೀಕೃಷ್ಣನನ್ನು ಬೇಡಿಕೊಂಡು, ಗುರುವಾಯೂರಿನಲ್ಲಿ ನಲವತ್ತೊಂದು ದಿನಗಳ ಕಾಲ ಇದ್ದು, ಕೃಷ್ಣನ ಪೂಜೆಯಲ್ಲಿ ತಾವೂ ಭಾಗಿಯಾದರು. ಅವರು ಆಗ ಹಾಕಿಕೊಟ್ಟ ಪೂಜಾಸಂಪ್ರದಾಯವೇ ಈಗಲೂ ಅನುಷ್ಠಾನಗೊಂಡು ಮುಂದುವರಿಯುತ್ತಿದೆ.

ಸಾವಿರದ ಒಂಭೈನೂರ ಎಪ್ಪತ್ತನೆಯ ನವೆಂಬರ್ ಇಪ್ಪತ್ತೊಂಬತ್ತರಂದು ರಾತ್ರಿ ಗುರುವಾಯೂರು ಕೃಷ್ಣನ ದೇವಾಲಯಕ್ಕೆ ಆಕಸ್ಮಿಕವಾಗಿ ಬೆಂಕಿಬಿದ್ದು, ದೇವಾಲಯದ ಬಹುಭಾಗ ಬೆಂಕಿಗೆ ಆಹುತಿಯಾಯಿತು. ಆದರೆ ಗರ್ಭಗುಡಿಗೆ ಹಾಗೂ ಕೃಷ್ಣನ ವಿಗ್ರಹಕ್ಕೆ ಕಿಂಚಿತ್ತೂ ಅಪಾಯ ಒದಗಲಿಲ್ಲ. ಇದನ್ನು ಪವಾಡಸದೃಶವೆಂದೇ ತಿಳಿಯಬೇಕಾಗಿದೆ.

ಮಂಜುಳ ಎಂಬ ಒಬ್ಬ ಹೂಮಾರುವ ಹುಡುಗಿಯು ಪ್ರತಿನಿತ್ಯವೂ ಬಂದು ಸುಂದರವಾದ ಹಾರವನ್ನು ಕಟ್ಟಿ, ಭಕ್ತಿ ಮತ್ತು ಪ್ರೀತಿಯಿಂದ ಅದನ್ನು ತಂದು ಕೃಷ್ಣನಿಗೆ ಸಮರ್ಪಿಸುತ್ತಿದ್ದಳು. ಭಕ್ತಿ ಪ್ರಿಯನಾದ ಶ್ರೀಕೃಷ್ಣನು ಆ ಹಾರವನ್ನು ಅಷ್ಟೇ ವಿಶ್ವಾಸದಿಂದ ಸ್ವೀಕರಿಸುತ್ತಿದ್ದನು. ಹೀಗಿರಲು ಒಂದು ದಿನ ಪರಸ್ಥಳಕ್ಕೆ ಹೋಗಿದ್ದ ಮಂಜುಳ, ಹಾರವನ್ನು ಕಟ್ಟಿ ತರುವುದು ತಡವಾಗಿ, ಅಂದಿನ ಪೂಜಾವೇಳೆ ಮುಗಿದಿದ್ದು, ಅವಳು ತಂದಿದ್ದ ಹಾರವನ್ನು ಕೃಷ್ಣನಿಗೆ ಅರ್ಪಿಸಲು ಸಾಧ್ಯವಿಲ್ಲವೆಂಬ ಮಾತು ಅರ್ಚಕರಿಂದ ತಿಳಿಯಿತು. ಖಿನ್ನಳಾದ ಮಂಜುಳ, ಸನಿಹದಲ್ಲೇ ಇರುವ ಆಲದಮರದ ಕೆಳಗಡೆ ಇರುವ ಪುಟ್ಟಕೃಷ್ಣನ ಮೂರ್ತಿಗೆ ಅರ್ಪಿಸಿ, ಹೊರಟುಹೋದಳು. ಮರುದಿನ ಅರ್ಚಕರು ಆಲಯದಲ್ಲಿನ ಕೃಷ್ಣವಿಗ್ರಹದ ನಿರ್ಮಾಲ್ಯವನ್ನು ತೆಗೆದು ಅಭಿಷೇಕಮಾಡಲು ಹವಣಿಸಿದಾಗ, ನಿರ್ಮಾಲ್ಯವನ್ನು ಎಷ್ಟುಬಾರಿ ತೆಗೆದರೂ ಒಂದು ಹಾರವು ಮಾತ್ರ ವಿಗ್ರಹದ ಕೊರಳಲ್ಲಿ ಉಳಿಯುತ್ತಲೇ ಅರ್ಚಕರಿಗೆ ಅಭಿಷೇಕಮಾಡಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ಆಲದಮರದ ಕೆಳಗೆ ಇರುವ ಪುಟ್ಟ ಕೃಷ್ಣಮೂರ್ತಿಯ ಮೇಲಿನ ಹಾರವನ್ನು ತೆಗೆಯಬೇಕೆಂಬುದಾಗಿ ಅರ್ಚಕರಿಗೆ ಕೃಷ್ಣನ ಆಣತಿ ಕೇಳಿಬಂದು. ಹತ್ತಿರದಲ್ಲಿಯೇ ಇದ್ದ ಆಲಯದ ಮರದ ಕೆಳಗಿರುವ ಕೃಷ್ಣನಿಗೆ ಹಾಕಿದ್ದ ಹಾರವನ್ನು ಅರ್ಚಕರು ತೆಗೆದು ನೋಡಿದಾಗ, ಆ ಹಾರವು ಹಿಂದಿನ ದಿವಸ ಮಂಜುಳ ಭಕ್ತಿನಿಷ್ಠೆಯಿಂದ ಕಟ್ಟಿ, ದೇವಾಲಯಕ್ಕೆ ತಂದಿದ್ದ ಹಾರವೇ ಆಗಿತ್ತು. ಅನಂತರ ಅರ್ಚಕರು ದೇವಾಲಯಕ್ಕೆ ಬಂದು ನೋಡಿದಾಗ ಕೃಷ್ಣನ ಕೊರಳಲ್ಲಿ ನಿರ್ಮಾಲ್ಯದ ಹಾರ ಇರಲಿಲ್ಲ. ನಂತರ ಅಭಿಷೇಕ ಮುಂತಾಗಿ ಸಾಂಪ್ರದಾಯಿಕ ಪೂಜೆಗಳು ನಡೆದವು. ಈ ರೀತಿಯಾಗಿ ಭಕ್ತಪ್ರಿಯನೂ, ಭಕ್ತವರದನೂ ಆದ ಶ್ರೀಕೃಷ್ಣನು ಮಂಜುಳ ಪ್ರೀತಿಯಿಂದ ಕಟ್ಟಿ ತಂದುಹಾಕಿದ್ದ ಹಾರವನ್ನು ಸ್ವೀಕರಿಸಿ, ಎಲ್ಲರನ್ನೂ, ಆಶ್ಚರ್ಯಚಕಿತರನ್ನಾಗಿಯೂ ಹಾಗೂ ಮಂತ್ರಮುಗ್ಧರನ್ನಾಗಿಯೂ ಮಾಡಿದನು. ಅಂದಿನಿಂದ ಮಂಜುಳಳಿಗೆ ''ಮಂಜುಳಾಲ'' ಎಂಬ ಹೆಸರಾಯಿತು. ಆ ಆಲದಮರದ ಬಳಿ ಈಗ ದೊಡ್ಡ ಗರುಡದೇವರು ಸ್ಥಾಪನೆಯಾಗಿ, ಭಕ್ತೆಯಾದ ಪುಟ್ಟಬಾಲಕಿ ಮಂಜುಳಳ ಹೆಸರು ಚಿರಸ್ಥಾಯಿಯಾಗಿ, ಶಾಶ್ವತವಾಗಿ ಉಳಿದಿದ್ದು, ಭಕ್ತಿಯ ಬೆಲೆಯನ್ನು ಎತ್ತಿತೋರಿಸಿದೆ. ಗುರುವಾಯೂರಿಗೆ ಹೋಗುವ ಭಕ್ತ ಸಮೂಹವೆಲ್ಲ ಮಂಜುಳಳ ಜ್ಞಾಪಕಾರ್ಥವಾಗಿ ನಿಲ್ಲಿಸಿರುವ ಗರುಡರ ಮುಂದೆ ಒಂದು ಕ್ಷಣ ನಿಂತು ''ಮಂಜುಳಾಲ'' ಎಂದು ನೆನಪಿಸಿಕೊಂಡು, ಅವಳ ಭಕ್ತಿಗೆ ಶಿರಬಾಗಿ ಮುಂದೆ ನಡೆಯುತ್ತಾರೆ.

ಚೆಂಬೈ ವೈದ್ಯನಾಥ ಐಯ್ಯರ್‌ರವರು ಪ್ರತಿ ವೃಶ್ಚಿಕ ಏಕಾದಶಿಯಂದು ಗುರುವಾಯೂರಿಗೆ ಬಂದು ಶ್ರೀಕೃಷ್ಣನಿಗೆ ಸಂತೋಷದಿಂದ ಸಂಗೀತಸೇವೆ ಅರ್ಪಿಸುತ್ತಿದ್ದರು. ಇದು ನಿರಂತರವಾಗಿ ಸಾಗುತ್ತಿದ್ದ ಅವರ ಅಪೂರ್ವ ಸೇವೆಯಾಗಿತ್ತು. ಒಮ್ಮೆ ಅವರಿಗೆ ಗಂಟಲು ಕಟ್ಟಿಹೋಗಿ, ಸ್ವರವನ್ನು ಉಚ್ಚರಿಸಲೂ ಆಗದಂತಹ ಗಂಟಲು ನೋವು ಬಂದು, ಏಕಾದಶಿಯಂದು ಗುರುವಾಯೂರಿನಲ್ಲಿ

ನಡೆಸಬೇಕಾದ ಸಂಗೀತಸೇವೆ ಸಾಧ್ಯವಾಗ ದಂತಹ ಪರಿಸ್ಥಿತಿಯುಂಟಾಯಿತು. ಅಂತಹ ಸ್ಥಿತಿಯಲ್ಲಿಯೂ ಭಕ್ತರಾದ ಚೆಂಬೈರವರು ಗುರುವಾಯೂರಿಗೆ ಹೋದರು. ಮರುದಿನವೇ ವೃಶ್ಚಿಕ ಏಕಾದಶಿಯಾಗಿದ್ದು, ಚೆಂಬೈರವರ ಸಂಗೀತಸೇವೆ ನಡೆಯಬೇಕಾಗಿದ್ದಿತು. ರಾತ್ರಿ ಚೆಂಬೈರವರ ಕನಸಿನಲ್ಲಿ ಕೃಷ್ಣನು ಕಾಣಿಸಿಕೊಂಡು, ದೇವಾಲಯದ ಹತ್ತಿರವಿರುವ ಯಾವುದೋ ಒಂದು ಔಷಧೀಯ ಸೊಪ್ಪನ್ನು ಹೆಸರಿಸಿ, ಅದನ್ನು ಅರೆದು ಗಂಟಲಿಗೆ ಹಚ್ಚಿಕೊಳ್ಳಬೇಕೆಂದು ಅಪ್ಪಣೆ ಮಾಡಿದನು. ಚೆಂಬೈರವರು ಅರ್ಚಕ ರೊಡಗೂಡಿ ಆ ಮಧ್ಯರಾತ್ರಿಯಲ್ಲಿ ಕೃಷ್ಣನು ಹೆಸರಿಸಿದ ಸೊಪ್ಪನ್ನು ಹುಡುಕಿ ತಂದು ಅರೆದು ಗಂಟಲಿಗೆ ಹಚ್ಚಿಕೊಂಡು ಮಲಗಿದರು. ಬೆಳಗಾಗುವುದರೊಳಗೆ ಕಟ್ಟಿಹೋಗಿದ್ದ ಗಂಟಲು ಸರಿಯಾಗಿ ನೋವೆಲ್ಲ ಮಾಯವಾಗಿ ಪ್ರತಿವರ್ಷದಂತೆಯೇ ಅದ್ಭುತವಾಗಿ ಶ್ರೀಕೃಷ್ಣನಿಗೆ ತಮ್ಮ ಭಕ್ತಿಪೂರ್ವಕವಾದ ಸಂಗೀತ ಸೇವೆಯನ್ನು ಮಾಡಿದರು. ಅಂದಿನಿಂದ ವೃಶ್ಚಿಕ ಏಕಾದಶಿಯನ್ನು ''ಚೆಂಬೈ ಏಕಾದಶಿ'' ಎಂದೇ ಗುರುತಿಸಿ, ಇಡೀ ದಿನ ಅಸಂಖ್ಯ ಸಂಗೀತಗಾರರಿಂದ ಸಂಗೀತಸೇವೆಯನ್ನು ಏರ್ಪಡಿಸಿ, ನಾದಪ್ರಿಯ, ವೇಣುಗಾನಲೋಲ ಶ್ರೀಕೃಷ್ಣಪರಮಾತ್ಮನನ್ನು ತೃಪ್ತಿಪಡಿಸಲಾಗುತ್ತಿದೆ.

ಈ ರೀತಿಯಾಗಿ ಪವಾಡ ಸದೃಶವಾದ ಮತ್ತು ಪಾರಮಾರ್ಥಿಕ ಹಿನ್ನೆಲೆಯುಳ್ಳ ಗುರುವಾಯೂರು ಪ್ರಸಿದ್ಧವಾದ ಪುಣ್ಯಕ್ಷೇತ್ರವೂ ಹಾಗೂ ತೀರ್ಥಕ್ಷೇತ್ರವೂ ಆಗಿದೆ. ಭೂಲೋಕ ವೈಕುಂಠವೆನಿಸಿ, ದೇಶವಿದೇಶಗಳಿಂದ ನಿರಂತರವಾಗಿ ಭಕ್ತರ ಪ್ರವಾಹ ಹರಿದು ಬರುತ್ತಿರುವ ''ತಿರುಮಲಕ್ಷೇತ್ರ'' ದಂತೆಯೇ ದಕ್ಷಿಣದ್ವಾರಕೆ ಎನಿಸಿ, ಕಲಿಯುಗದ ಕಾಮಧೇನುವೆನಿಸಿ, ಪ್ರತ್ಯಕ್ಷನಾರಾಯಣನೆನಿಸಿ, ಭಕ್ತರನ್ನು ಭಕ್ತಿಸಾಗರದಲ್ಲಿ ಮುಳುಗಿಸಿರುವ ದೇವಾದಿದೇವ ಕೇರಳದ ಗುರುವಾಯೂರಿನಲ್ಲಿ ನೆಲೆಸಿರುವ ಶ್ರೀಕೃಷ್ಣನು, ''ಗುರುವಾಯೂರಪ್ಪ'' ಎಂದು ಸದಾ ಭಕ್ತರ ನಾಲಿಗೆಯಲ್ಲಿ ನಲಿಯುತ್ತಿದ್ದಾನೆ. ಗುರುವಾಯೂರಪ್ಪನ ದರ್ಶನಕ್ಕಾಗಿ ಬರುವ ಭಕ್ತಕೋಟಿಯು ದೈವಿಕ ವಾತಾವರಣದಲ್ಲಿ, ಹರಿನಾಮದುದ್ಘೋಷದಲ್ಲಿ ತಮ್ಮ ಇಷ್ಟದೈವದ ದರ್ಶನಮಾಡಿ, ಬಾಲಕೃಷ್ಣನ ವ್ಯಾಮೋಹಕ್ಕೊಳಗಾಗಿ, ಐಹಿಕ ವ್ಯಾಮೋಹ ದಿಂದ ದೂರವಾಗಿ, ಭಕ್ತಿಪರವಶರಾಗಿ ಜೀವನ್ಮುಕ್ತರಾಗುತ್ತಾರೆ. ಹೀಗೆ ಹರಿ ಹಾಗೂ ಹರ ಕ್ಷೇತ್ರವಾದ ಗುರುವಾಯೂರು ಭಕ್ತಜನರ ಅಭೀಷ್ಟನೀಡುವ ಪುಣ್ಯತಾಣವಾಗಿದೆ.

ಭಕ್ತರ ನಿತ್ಯಸೇವೆಗಾಗಿ ಸ್ವಯಂ ಭಗವಂತನೇ ಗುರುವಾಯೂರಿನಲ್ಲಿ ದಿವ್ಯ ವಿಗ್ರಹರೂಪದಲ್ಲಿ ಪ್ರತಿಷ್ಠೆಗೊಂಡು, ಕಲಿಯುಗದಲ್ಲಿ ಭಕ್ತರ ದೈಹಿಕ ಮತ್ತು ಮಾನಸಿಕ ರೋಗಗಳನ್ನು ಪರಿಹರಿಸಿ, ಪರಮಾನಂದಾಮೃತವನ್ನೀಯಲು ವಿರಾಜಮಾನ ನಾಗಿದ್ದಾನೆ. ಅಂತಹ ಶ್ರೀಕೃಷ್ಣನ ಪ್ರಾರ್ಥನೆ, ಜಪ ತಪಗಳನ್ನು ಮಾಡುವುದರ ಮೂಲಕ ಅವನ ಕೃಪೆಗೆ ಪಾತ್ರರಾಗಿ ನಿರಂತರ ಸುಖವನ್ನು ಅತಿ ಸುಲಭವಾಗಿ ಪಡೆಯಬಹುದು. ಅಪಾರನೂ, ಅಮಿತನೂ, ಅನಂತನೂ ಆದ ಶ್ರೀಕೃಷ್ಣನನ್ನು ಜನರು ಪೂಜಿಸುವುದರಿಂದ ಇಹದಲ್ಲಿ ಶಾಂತಿ, ನೆಮ್ಮದಿ, ಸಮಾಧಾನ ಹಾಗೂ ಸೌಖ್ಯವನ್ನು ಪಡೆದು, ಪರದಲ್ಲಿ ಮುಕ್ತಿಯನ್ನು ಹೊಂದ ಬಹುದು. ಗುರುವಾಯೂರು ಶ್ರೀಕೃಷ್ಣನು ತಾನು ''ಭಕ್ತಪ್ರಿಯ'' ಎಂಬುದಾಗಿ ತಾನೇ ಘಂಟಾಘೋಷವಾಗಿ ಹೇಳಿದ್ದಾನೆ. ''ಯದ್ಭಾವಂ ತದ್ಭವತಿ'' ಎಂಬಂತೆ ಅವರವರ ಭಕ್ತಿಭಾವನೆಗಳಿಗೆ, ಅವರವರ ಪೂಜೆ ಪುನಸ್ಕಾರಗಳಿಗೆ ತಕ್ಕಂತೆ ಭಕ್ತರ ಅಭೀಷ್ಟಗಳನ್ನು ಈಡೇರಿಸಿ ರಕ್ಷಿಸುತ್ತಾನೆ ಮತ್ತು ಆಯುರಾರೋಗ್ಯ ಸೌಖ್ಯಗಳನ್ನಿತ್ತು ಕಾಪಾಡುತ್ತಾನೆ. ★

---

(8 ನೇ ಪುಟದಿಂದ)

11) ಕೋಟಿ ತೀರ್ಥಘಾಟ, 12) ಬುದ್ಧಘಾಟ-ಇವು ದಕ್ಷಿಣ ಭಾಗದಲ್ಲಿರುವ ಸ್ನಾನಘಟ್ಟಗಳು. ಇನ್ನು,

1) ಗಣೇಶಘಾಟ, 2) ಮಾನಸಘಾಟ, 3) ದಶಾಶ್ವಘಾಟ, 4) ಚಕ್ರತೀರ್ಥಘಾಟ, 5)ಕೃಷ್ಣಗಂಗಾಘಾಟ, 6) ಸೋಮತೀರ್ಥಘಾಟ, 7) ಬ್ರಹ್ಮಲೋಕ ಘಾಟ, 8) ಘಂಟಾಭರಣ ಘಾಟ, 9) ಧಾರಾಪತಘಾಟ, 10) ಸಂಗಮ ತೀರ್ಥ ಘಾಟ, 11) ನವತೀರ್ಥ ಘಾಟ, 12) ಅನಿಕುಂಡಘಾಟ - ಇವು ಉತ್ತರ ಭಾಗದಲ್ಲಿರುವ ಸ್ನಾನಘಟ್ಟಗಳೆನಿಸಿಕೊಳ್ಳುತ್ತವೆ. ಈ ಎಲ್ಲ ಸ್ನಾನಘಟ್ಟಗಳಲ್ಲಿ ವಿಶ್ರಾಮಘಾಟಕ್ಕೆ ವಿಶೇಷ ಮಹತ್ವವಿದೆ. ಏಕೆಂದರೆ ಕಂಸನನ್ನು ಸಂಹಾರ ಮಾಡಿದ ನಂತರ ಶ್ರೀಕೃಷ್ಣನು ಈ ಪ್ರವಾಹದ ದಂಡೆಗೆ ಬಂದು ಸ್ವಲ್ಪ ಸಮಯ ವಿಶ್ರಮಿಸಿದನಂತೆ. ಆದುದರಿಂದಲೇ ಈ ಸ್ನಾನ ಘಟ್ಟಕ್ಕೆ ''ವಿಶ್ರಾಮಘಾಟ'' ಎಂಬ ಹೆಸರು ಬಂದಿತೆಂದು ಹೇಳುತ್ತಾರೆ. ಈ ಸ್ನಾನಘಟ್ಟದಲ್ಲಿ ಪ್ರತಿದಿನವೂ ಪ್ರವಾಹ ರೂಪಿಯಾದ ಯಮುನಾದೇವಿಗೆ ಆರತಿಯನ್ನು ಬೆಳಗುವ (ಮಾಡುವ) ಸಂಪ್ರದಾಯವಿದೆ. ಯಮ ದ್ವಿತೀಯಾ ದಿನದಂದು ವಿಶ್ರಾಮಘಾಟದ ಪ್ರವಾಹದಲ್ಲಿ ಸ್ನಾನ ಮಾಡುವುದರಿಂದ ಮೋಕ್ಷಪ್ರಾಪ್ತಿಯಾಗುವುದೆಂಬ ನಂಬಿಕೆ ಇದೆ.

ಧ್ರುವಘಾಟದಲ್ಲಿ ಚಿಕ್ಕದಾದ ಧ್ರುವಮಹಾರಾಜನ ಮಂದಿರವಿದ್ದರೆ, ಅಸಿಕುಂಡದ ಸ್ನಾನಘಟ್ಟವನ್ನು ವರಾಹಕ್ಷೇತ್ರವೆಂದು ಭಾವಿಸುತ್ತಾರೆ. ಇಲ್ಲಿ ವರಾಹ ಹಾಗೂ ಗಣೇಶನ ಮಂದಿರಗಳಿವೆ. ಶ್ರೀಕೃಷ್ಣ ಭಕ್ತರು ಮಸೀದಿಯ ಹಿಂಭಾಗದಲ್ಲಿ ಬೇರೊಂದು ಕೇಶವನ ಮಂದಿರವನ್ನು ನಿರ್ಮಿಸಿದ್ದಾರೆ. ಆ ದೇವಾಲಯದ ಸಮೀಪದಲ್ಲಿ ಪೋತಾನಾ ನಾಯಕ ಒಂದು ಕುಂಡವಿದ್ದು, ಅದರ ಸಮೀಪದಲ್ಲಿ ಗಂಗಾಜಿಯ ಮಂದಿರವೂ ಇದೆ. ನಗರದ ಪ್ರಮುಖ ದೇವಮಂದಿರವೆಂದರೆ ದ್ವಾರಕಾನಾಥ ಪ್ರಭು ಶ್ರೀಕೃಷ್ಣನದು. ಈ ಎಲ್ಲ ದೇವಾಲಯಗಳಲ್ಲಿ ವಲ್ಲಭ ಸಂಪ್ರದಾಯ ಪದ್ಧತಿಯಂತೆ ಪೂಜಾದಿಗಳು ನಡೆಯುತ್ತವೆ. ದೇವನಿಗರ್ಪಿತವಾದ ನೈವೇದ್ಯಾದಿಗಳು ಹೊರಭಾಗದಲ್ಲಿ ಮಾರಾಟಕ್ಕೆ ದೊರೆಯುತ್ತವೆ. ಭಾರತೀಯರು ತಮ್ಮ ಜೀವನದಲ್ಲಿ ಒಮ್ಮೆಯಾದರೂ ಮಥುರಾನಗರಕ್ಕೆ ಭೇಟಿ ಕೊಟ್ಟಲ್ಲಿ ಅವರ ಜನ್ಮವು ಸಾರ್ಥಕವಾಗುವುದರಲ್ಲಿ ಸಂದೇಹವಿಲ್ಲ.

ದಿಲ್ಲಿಯಿಂದ ಆಗ್ರಾ, ಮಥುರಾಗಳಿಗೆ ಬಂದು ಹೋಗಲು ರೈಲು ಪ್ರಮಾಣ ಮಾಡಬಹುದಾಗಿದೆ. ಮುಂಬೈ ಮಾರ್ಗ ವಾಗಿಯೂ ಪ್ರಯಾಣ ಬೆಳೆಸಬಹುದಾಗಿದೆ.

★★★★★

### ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.

# ಅಕ್ಕಿಯನ್ನು ಕೊಂಡುಕೊಳ್ಳುವಿಕೆ – ಗುಣಮಟ್ಟವನ್ನು ಕಾಯ್ದುಕೊಳ್ಳುವಿಕೆ

- ಮಾರ್ಕೆಟಿಂಗ್ ಅಧಿಕಾರಿ, ತಿ.ತಿ.ದೇ. ತಿರುಪತಿ.

ತಿರುಮಲೆಗೆ ಪ್ರತಿನಿತ್ಯ ಬರುವ ಯಾತ್ರಿಕರ ಸೌಕರ್ಯಕ್ಕೆಂದು 1985 ರಿಂದ ಶ್ರೀ ವೆಂಕಟೇಶ್ವರಸ್ವಾಮಿ ನಿತ್ಯಾನ್ನದಾನ ಯೋಜನೆಯನ್ನು ತಿ.ತಿ.ದೇ. ನಡೆಸಿಕೊಂಡುಬರುತ್ತದೆ. ಈ ಯೋಜನೆಗೆ ಅಗತ್ಯವಾದ ಅಕ್ಕಿಯನ್ನು ತಿ.ತಿ.ದೇ. ಮಾರ್ಕೆಟಿಂಗ್ ವಿಭಾಗವು ಕೊಂಡುಕೊಂಡು ಸರಬರಾಜು ಮಾಡುತ್ತಿದೆ.

ನಿತ್ಯಾನ್ನದಾನ ಯೋಜನೆಯೇ ಅಲ್ಲದೆ, ತಿರುಮಲೆಯ ಶ್ರೀ ವೆಂಕಟೇಶ್ವರ ಅತಿಥಿಗೃಹದ ಕ್ಯಾಂಟೀನ್, ತಿರುಪತಿಯ ಶ್ರೀ ಪದ್ಮಾವತೀ ಅತಿಥಿಗೃಹದ ಕ್ಯಾಂಟೀನ್, ತಿರುಮಲೆ ಹಾಗೂ ತಿರುಪತಿಯ ತಿ.ತಿ.ದೇ. ಸಿಬ್ಬಂದಿಯ ಕ್ಯಾಂಟೀನ್, ಶ್ರೀ ವೆಂಕಟೇಶ್ವರ ಸಂಸ್ಕೃತ ಕಾಲೇಜು ವಸತಿಗೃಹ, ಶ್ರೀ ವೆಂಕಟೇಶ್ವ ವೈದ್ಯಶಾಸ್ತ್ರ ಸಂಸ್ಥೆ - ಮೊದಲಾದವುಗಳಿಗೆ ಬೇಕಾಗಿಬರುವಂತಹ ಅಕ್ಕಿಯನ್ನೂ ಸಹ ಮಾರ್ಕೆಟಿಂಗ್ ವಿಭಾಗದ ಮೂಲಕವೇ ಸರಬರಾಜು ಮಾಡಲಾಗುತ್ತದೆ. ಸಾಲಿಯಾನ 2400 ಮೆಟ್ರಿಕ್ ಟನ್‌ಗಳಷ್ಟು ಅಕ್ಕಿಯನ್ನು ತಿ. ತಿ. ದೇವಸ್ಥಾನಗಳ ವಿವಿಧ ವಿಭಾಗಗಳಲ್ಲಿ ಬಳಸಲಾಗುತ್ತಿದೆ.

ಅಕ್ಕಿಯನ್ನು ಕೊಳ್ಳುವ ವಿಧಾನ : ದೇವಸ್ಥಾನಗಳಿಗೆ ಬೇಕಾಗಿ ಬರುವ 2400 ಮೆಟ್ರಿಕ್ ಟನ್ ಅಕ್ಕಿಯನ್ನು ಬಹಿರಂಗ ಟೆಂಡರು ವಿಧಾನದ ಮೂಲಕ ಕೊಂಡುಕೊಳ್ಳಲಾಗುತ್ತದೆ. ಅಕ್ಕಿಯ ಗಿರಣಿ ಯಜಮಾನರು, ಅಕ್ಕಿಯ ವ್ಯಾಪಾರಿಗಳು, ಸರ್ಕಾರೀ ರಂಗ ಸಂಸ್ಥೆಗಳು, ಸಹಕಾರ ಸಂಘಗಳು - ಈ ಟೆಂಡರುಗಳಲ್ಲಿ ಪಾಲುಗೊಳ್ಳುತ್ತವೆ. ಟೆಂಡರಿನೊಡನೆ 2.5 ಶತಾಂಶ ಠೇವಣಿ ಕಟ್ಟಬೇಕಾಗುತ್ತದೆ. ಬಂದ ಟೆಂಡರುಗಳನ್ನು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ, ಆರ್ಥಿಕ ಸಲಹೆಗಾರ ಹಾಗೂ ಪ್ರಧಾನ ಗಣಾಂಕ ಅಧಿಕಾರಿ, ಮಾರ್ಕೆಟಿಂಗ್ ಅಧಿಕಾರಿ, ವೆಂಕಟೇಶ್ವರ ಡೈರಿಫಾರಂ ನಿರ್ದೇಶಕರು ಹಾಗೂ ತಿ.ತಿ.ದೇ. ಸಾರಿಗೆ ವಿಭಾಗದ ಜನರಲ್ ಮ್ಯಾನೇಜರ್ - ಮುಂತಾದ ಅಧಿಕಾರಿಗಳು ಸೇರಿದ ಒಂದು ಸಮಿತಿಯು ಕರಾರು ಮಾಡುತ್ತದೆ. ಅತಿ ಕಡಿಮೆ ದರ ಸೂಚಿಸಿದ ಟೆಂಡರುಗಳನ್ನು ಶಿಫಾರಸು ಮಾಡುವರು. ಹೀಗೆ ಕರಾರು ಮಾಡಲಾದ ಟೆಂಡರುಗಳು ಕಾರ್ಯನಿರ್ವಹಣಾಧಿಕಾರಿಗಳ ಶಿಫಾರಸಿನೊಡನೆ ತಿ.ತಿ.ದೇ. ಪಾಲಕ ಮಂಡಳಿಯ ಆಮೋದ ಹೊಂದಬೇಕಾಗಿರುತ್ತದೆ. ಪ್ರಸ್ತುತ ದೇವಾಲಯಗಳಿಗೆ ಬೇಕಾಗುವ ಅಕ್ಕಿಯನ್ನು ಕ್ವಿಂಟಾಲ್ 1 ಕ್ಕೆ ರೂ. 1175-00 ಗಳ ದರದಲ್ಲಿ ರಾಷ್ಟ್ರೀಯ ವ್ಯವಸಾಯ ಸಹಕಾರ ಮಾರ್ಕೆಟಿಂಗ್ ವಿಭಾಗವು (ಎನ್.ಎ.ಎಫ್.ಇ.ಡಿ. - ಚೆನ್ನೈ) ಸರಬರಾಜು ಮಾಡುತ್ತಿದೆ.

**ಗುಣಮಟ್ಟದ ನಿಯಂತ್ರಣ :**

ದೇವಸ್ಥಾನಗಳಿಗೆ ಸೋನಾಮಸೂರಿ ಅಕ್ಕಿಯನ್ನು ಮಾತ್ರವೇ ಸರಬರಾಜು ಮಾಡಬೇಕಾಗುತ್ತದೆ. ಸರಬರಾಜು ಮಾಡುವಂತಹ ಅಕ್ಕಿಯು ಕೆಳಕಂಡ ಗುಣಮಟ್ಟ ನಿಯಮಗಳಿಗೆ ಒಳಗಾಗಿರಬೇಕು.

| | | |
|---|---|---|
| 1. ಸಣ್ಣ ನುಚ್ಚು | - | $\frac{1}{3}$ ಅಥವಾ ಅದಕ್ಕಿಂತ ಕಡಿಮೆ ಪರಿಮಾಣವಿರುವಂತಹದು 1 ರಿಂದ 2 ಶತಾಂಶ. |
| 2. ದೊಡ್ಡ ನುಚ್ಚು | - | $\frac{1}{3}$ ರಿಂದ $\frac{1}{2}$ ದ ವರೆಗಿನ ಪರಿಮಾಣ ವಿರುವಂತಹದು 15 ರಿಂದ 20 ಶತಾಂಶ. |
| 3. ಅನ್ಯ ಪದಾರ್ಥ | - | 0.2 ರಿಂದ 0.5 ಶತಾಂಶ. |
| 4. ಕೆಟ್ಟುಹೋದಕಾಳು (ಧಾನ್ಯ) | | 0.5 ರಿಂದ 2.0 ಶತಾಂಶ. |
| 5. ವಿವರ್ಣವಾದ ಕಾಳು | - | 2 ಶತಾಂಶ. |
| 6. ಬಿಳಿಯ ಕಾಳು | - | 4 ರಿಂದ 8 ಶತಾಂಶ. |
| 7. ಇತರ ಮಿಶ್ರಣ | - | 4 ರಿಂದ 10 ಶತಾಂಶ. |
| 8. ತೇವ | - | 13 ರಿಂದ 14 ಶತಾಂಶ. |

ತಿ.ತಿ.ದೇ. ಆರೋಗ್ಯ ವಿಭಾಗದಲ್ಲಿನ ಇನ್‌ಸ್ಪೆಕ್ಟರುಗಳು, ಸರಬರಾಜು ಆಗಿರುವ ಅಕ್ಕಿಯಲ್ಲಿನ ಹತ್ತು ಶತಾಂಶದ ವರೆಗೆ ಅಕ್ಕಿಯನ್ನು ಯಾದೃಚ್ಛಿಕವಾಗಿ ಮಾದರಿಗಾಗಿ ತೆಗೆದುಕೊಂಡು ರಹಸ್ಯವಾದ ಸಂಕೇತಾಕ್ಷರಗಳನ್ನು ಹಾಕಿ ತಿರುಮಲೆಯ ತಿ.ತಿ.ದೇ. ಪ್ರಯೋಗಶಾಲೆಗೆ ಗುಣ ಮಟ್ಟ ವಿಶ್ಲೇಷಣೆಗೆ ಕಳುಹಿಸುವರು. ಪ್ರಯೋಗ ಶಾಲೆಯಲ್ಲಿ ಗುಣಮಟ್ಟದ ವಿಶ್ಲೇಷಣೆ ನಡೆದ ನಂತರ ಮಾದರಿಗಳು ನಿಬಂಧನೆಗಳಿಗೆ ಅನುಸಾರವಾಗಿದ್ದಲ್ಲಿ ಅಂಗೀಕರಿಸಲ್ಪಡುವುವು ಇಲ್ಲವಾದರೆ ತಿರಸ್ಕರಿಸಲ್ಪಡುವುವು.

ಇದರಂತೆಯೇ ಮಾರ್ಕೆಟಿಂಗ್ ವಿಭಾಗದಲ್ಲಿ ಪ್ರತಿ ಸರಬರಾಜಿಗೂ ಸಂಬಂಧಿಸಿದ ಅಕ್ಕಿಯನ್ನು ಪರೀಕ್ಷೆ ಮಾಡಿ ಪರಿಶೀಲಿಸುವರು. ಅನ್ನ ಮುದ್ದೆಯಾಗಿ ತಯಾರಾದರೆ ಅಂತಹ ಸರಬರಾಜನ್ನು ತಿರಸ್ಕರಿಸಲಾಗುತ್ತದೆ.

ಮೇಲೆ ಹೇಳಿದ ವಿಧಾನಗಳೇ ಅಲ್ಲದೆ ತಿ. ತಿ. ದೇವಸ್ಥಾನಗಳ ಮಾರ್ಕೆಟಿಂಗ್ ಅಧಿಕಾರಿ, ಅನ್ನದಾನ ಯೋಜನೆಯ ಉಪಕಾರ್ಯನಿರ್ವಹಣಾಧಿಕಾರಿ, ಹಾಗೂ ಭಾರತ ಆಹಾರ ಸಂಸ್ಥೆಯ ಸಹಾಯಕ ಮ್ಯಾನೇಜರುಗಳು ಅಕ್ಕಿಯನ್ನು ಭೌತಿಕವಾಗಿಯೂ ಪರೀಕ್ಷಿಸುವರು. ಇವರ ಪರಿಶೀಲನೆಯಲ್ಲಿ ಅಕ್ಕಿಯ ಗುಣಮಟ್ಟ ಕಡಿಮೆಯದೆಂದು ಕಂಡುಬಂದರೆ ಅಂತಹ ಸರಬರಾಜನ್ನು ತಿರಸ್ಕರಿಸಲಾಗುತ್ತದೆ.



ಜೂನ್ 4 ರಿಂದ 6 ರ ವರೆಗೆ ತಿರುಮಲೆಯಲ್ಲಿ ನಡೆದ

# ಜ್ಯೇಷ್ಠಾಭಿಷೇಕ







ನಾರಾಯಣವನದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು ↑

ಅಪ್ಪಲಾಯಗುಂಟದಲ್ಲಿನ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು ↓



# ದಾಸಸಾಹಿತ್ಯದಲ್ಲಿ ಎರಡು ಪ್ರಕರಣ

- ಸು. ಶ್ರೀನಿವಾಸ.

## ಗೋವರ್ಧನೋದ್ಧಾರ

ಶ್ರೀಮದ್‌ಭಾಗವತದಲ್ಲಿ ವರ್ಣಿತವಾದ ಭಗವಂತನ ಅನೇಕ ಮಹಿಮೆಗಳನ್ನು ನಮ್ಮ ಹರಿದಾಸರು ಚೆನ್ನಾಗಿ ರಸವತ್ತಾಗಿ ತಮ್ಮ ಪದಪದ್ಯಗಳಲ್ಲಿ ಬಣ್ಣಿಸಿರುವುದು ಕಂಡು ಬರುತ್ತದೆ. ಅವುಗಳಲ್ಲಿ ದಶಮಸ್ಕಂಧದಲ್ಲಿ ಬರುವ ''ಗೋವರ್ಧ ನೋದ್ಧಾರ'' ಮಹಿಮೆಯೂ ಒಂದಾಗಿದೆ. ಹರಿದಾಸರ ನುಡಿಗಳಲ್ಲಿ ಆ ವರ್ಣನೆಯನ್ನು, ಕಾಣುವ ಪ್ರಯತ್ನ ಇಲ್ಲಿದೆ.

ಗೋಪಾಲಕರೆಲ್ಲರೂ ಇಂದ್ರನ ಪ್ರೀತಿಯನ್ನು ಉದ್ದೇಶಿಸಿ, ಪ್ರತಿ ವರುಷವೂ ಪೂಜೆ ಮಾಡುತ್ತಿದ್ದರು. ಅವರನ್ನು ತನ್ನ ಪೂಜೆಯಲ್ಲಿ ಪ್ರವೃತ್ತರಾಗುವಂತೆ ಮಾಡಿ ಅತಿದೊಡ್ಡರೂಪವನ್ನು ಧರಿಸಿ ಅನೇಕ ಪ್ರಕಾರದ ಅನ್ನಾದಿ ಬಲಿಗಳನ್ನು ಇಂದ್ರನು ತಾನೇ ಸ್ವೀಕರಿಸುತ್ತಿದ್ದನು.

ಶ್ರೀಕೃಷ್ಣನ ಮಾತಿನಂತೆ ಗೋಪಾಲಕರು ಗೋವರ್ಧನ ಪೂಜೆಯನ್ನು ಮಾಡಿರುವುದನ್ನು ನೋಡಿ ಕುಪಿತನಾದ ಇಂದ್ರನು-

ವಾಚಾಲಂ ಮಾನಿನಂ ಮತ್ತಂ
ಅಜ್ಞಂ ಪಂಡಿತ ಮಾನಿನಂ ।
ಕೃಷ್ಣಂ ಮರ್ತ್ಯಮುಪಾಶ್ರಿತ್ಯ
ಗೋಪಾ ಮೇ ಚಕ್ರುರಪ್ರಿಯಂ ॥

ಶ್ರೀಮದ್‌ಭಾಗವತ - (10-23-5)

ಈ ಗೋಪಾಲಕರು ಮಾತುಗಾರನಾದ ತಿಳುವಳಿಕೆ - ಇಲ್ಲದ ಪಂಡಿತನಂತೆ ತೋರುವ ಮಾನವನಾದ ಕೃಷ್ಣನನ್ನು ಆಶ್ರಯಿಸಿ ನನಗೆ ಅಪ್ರಿಯವನ್ನು ಉಂಟುಮಾಡಿದರೆಂದು ಹೇಳುತ್ತ ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನ ಅವತಾರ (ಕೃಷ್ಣಸ್ತು ಭಗವಾನ್ ಸ್ವಯಮ್)ವೆಂಬುದನ್ನು ಮರೆತು ಸಿಟ್ಟಿನಿಂದ ಆ ಗೋಕುಲವನ್ನು ನಾಶಮಾಡುವ ಇಚ್ಛೆಯಿಂದ ಪ್ರಲಯಕಾಲೀನ ಮೇಘಗಳಿಗೆ ಆನೆಯ ಸೊಂಡಿಲಿನಂತೆ ಇರುವ ದೊಡ್ಡದಾದ ಹನಿಗಳಿಂದ ಮಳೆಸುರಿಸಲು ಆಜ್ಞೆಮಾಡಿದನು.

ಶ್ರೀ ಪ್ರಸನ್ನವೆಂಕಟದಾಸರು ಇದನ್ನು ವರ್ಣಿಸುವ ಪರಿ ಹೀಗಿದೆ-

ಗೋಷ್ಠದ ಜನರೆಲ್ಲ ಒಂದಿನಾ
ದೇವೇಂದ್ರನ ಅಬ್ಜತುಷ್ಟಿಗುತ್ಸವದಿ
ಮೃಷ್ಟಾನ್ನ ಪಾಕಸಿದ್ಧಮಾಡೆ
ಇತ್ತಿತ್ತೋಡಾಡೆ ಶ್ರೀಕೃಷ್ಣನಿಂದಿಸಿದ
ಇಷ್ಟಾರ್ಥವೀವ ಗೋವರ್ಧನಗಿರಿ
ವೃದ್ಧನುಈತಗಿಷ್ಟು ಪೂಜೆಯನು
ಶಿಷ್ಟರು ಮಾಡೆಂದಾಜ್ಞಾಪಿಸಿದ
ಬುದ್ಧಿಗಲಿಸಿದ ಗಿರಿಗಿಟ್ಟು ಉಣಿಸಿದ
ಶ್ರೀಹರಿಯೆ ಕೃಷ್ಣನೆಂಬುದು ಮರೆತ
ಐಶ್ವರ್ಯೋನ್ಮತ್ತ
ಪ್ರಳಯದ ಹನಿಯಿಂದ

ದೊಡ್ಡದಾದ ಜಲಧಾರೆಗಳಿಂದ ಪೀಡಿತ ರಾದ ಗೋಪಾಲಕರು ಶ್ರೀಕೃಷ್ಣನನ್ನು ರಕ್ಷಣೆಗಾಗಿ ಪ್ರಾರ್ಥಿಸಲು ತನ್ನ ಕಮಲದಂತಿರುವ ಮೃದುವಾದ ಎಡಗೈಯಿಂದ ಶ್ರೇಷ್ಠವಾದ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು (ಕರೇಣೈಕೇನ ಲೀಲಯಾ ಪುಷ್ಕರಂ ಗಜರಾಡಿವ ಬಿಭ್ರತ್) ಆ ಗೋಪಾಲಕರನ್ನು ರಕ್ಷಿಸಿ ಇಂದ್ರನ ಗರ್ವವನ್ನು ಮುರಿದನು.

ಆಕ್ರಂದಿಸಿದ ಪ್ರಾಣಿಗಳನೆಲ್ಲ
ನೋಡಿ ಸಿರಿನಲ್ಲ
ಪರಾಕ್ರಮ ಶೀಲಾ-
ನಕ್ಕು ಸಕ್ಕರ ಪಲ್ಲವದಿಂದ ಗಿರಿಯನೆತ್ತಿದಾ
ಚಿಕ್ಕ ಮಕ್ಕಳುಚ್ಚಿಲೀಂದ್ರ
ನಕ್ಕತ್ತಾಡುವಂತೆಳ್ದಿನಾ ಮತ್ತಸೂದನ
ತನ್ನ ಒಕ್ಕಲುಳುಹಿದ
ಅಕ್ಕರದಿ ದೀನವತ್ಸಲಾ ಜಿತಖಳಜಾಲ
ಇಂದ್ರನುಕ್ಕನು ಮುರಿದ

ದೇವೇಂದ್ರನು ನಿರಂತರವಾಗಿ ಏಳು ರಾತ್ರಿಗಳಲ್ಲಿ ಬಹಳವಾದ ಮಳೆಸುರಿಸಿದರೂ ಶ್ರೀಕೃಷ್ಣನಿಂದ ರಕ್ಷಿಸಲ್ಪಟ್ಟ ಗೋಕುಲವು ನಾಶವಾಗದಿರುವುದನ್ನು ನೋಡಿ ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನ ಅವತಾರವೇ ಎಂಬುದನ್ನು ಸ್ಮರಣೆಗೆ ತಂದುಕೊಂಡು ಆ ಶ್ರೀಕೃಷ್ಣನ ಪಾದಗಳಿಗೆ ಶರಣು ಹೊಕ್ಕು ಕ್ಷಮೆ ಯಾಚಿಸಿದನು.

ಆರೊಂದುದಿನ ಇಂದ್ರ ಘೋರ್ಮಳೆಗರೆದ
ಹರಿಯೆಲ್ಲರ ಹೊರೆದ
ನಿತ್ಯ ಭೂರ್ಯನ್ನಪಾನಾ
ಚಾರು ಶಯ್ಯಾಸನ ವಿತ್ತನು ವಿಶ್ವಕರ್ತನು
ಶ್ರೀ ನಾರಾಯಣನು
ಸಾರಿದ ಸಜ್ಜನರನು ಕಾವ
ಬೊಮ್ಮಾದ್ಯರ ದೇವ
ಸಾಸಿರ ನಯನನು
ಶ್ರೀ ರಮಣನ ಮಹಿಮೆ ನೋಡಿದ
ಮೈಯಿಡಾಡಿ ಇಳೆಯ ಸಾರಿ ಸ್ತುತಿಸಿದಾ
ಕ್ಷಮಿಸೆನ್ನವಗುಣ ದಯ ಮಾಡೈ
ಕೃಪೆಯಲಿನೋಡೈ



ಪಾದಕಮಲವಾಶ್ರಯಿಸಿದೆ
ಕುಮತಿ ನಿನ್ನವರನು ಕೆಡಿಸಿದೆ
ಕೇಡನೆಣಿಸಿದೆ
ನೆಂದು ಅಮರೇಂದ್ರ ತುತಿಸಿ
ನಮಿಸಿ ನಮಿಸಿ ತಾ ನುಡಿಯಲು
ಕೃಷ್ಣದಯಾಳು
ತಾ ಕ್ಷಮಿಸಿ ನುಡಿದನು
ಅಮರೇಶ ನಿನ್ನರ್ಚನೆ ಕೆಡಿಸಿದೆ
ಮದವಿಳಿಸಿದೆ
ಇನ್ನು ಭ್ರಮೆ ಬೇಡೆಚ್ಚರವು
...........................
ವರಗೋಕುಲಸ್ಥಲ ಸುಖಿಸಿತು
ನಿತ್ಯ ನಲಿದಿತು
ಶ್ರೀ ಪ್ರಸನ್ವೆಂಕಟ ದಯದಿ

ಶ್ರೀಕೃಷ್ಣನು ಇಂದ್ರನನ್ನು ಕುರಿತು ''ನಿನ್ನನ್ನು ಸನ್ಮಾರ್ಗದಲ್ಲಿ ಪ್ರವೃತ್ತಿಸುವುದಕ್ಕೆ ಪೂಜೆಯ ನಾಶರೂಪವಾದ ವಿಧಾನವು ನನ್ನಿಂದ ಮಾಡಲ್ಪಟ್ಟಿತು'' ಎಂಬುದಾಗಿ ಹೇಳಿದನು.

ನರಹರಿ ವಿಠಲರು ''ಗೋವರ್ಧನೋದ್ಧಾರ'' ಪ್ರಸಂಗವನ್ನು ವರ್ಣಿಸುವ ಪರಿ ಹೀಗಿದೆ - ''ಇದು ಏನೋ ತುಂಟತನ'' ಪದ್ಯದಲ್ಲಿ -

ಸುರಗೋಪಾಲರು ನರಹರಿವಿಠಲನ
ಪರದೇವತೆಯೆಂದರ್ಚಿಯ ಸಲಿಸಲು
ಪುರುಹೂತನು ಕೋಪದಿ ಮಳೆಗರೆಯಲು
ಕಿರಿಯ ಬೆರಳಿನಲಿ -
ಗಿರಿಯ ನೆತ್ತುವುದಿದು ಏನೋ ತುಂಟತನ

ಎಂದಾಗಿ ಹೇಳಿದ್ದಾರೆ.

ಮಹಿಪತಿದಾಸರು ''ಕೃಷ್ಣ ಎಂಥಾದೋ ನಿನ್ನ ಕರುಣೆ'' ಪದ್ಯದಲ್ಲಿ ಗೋಕುಲದ ಜನರನ್ನು ರಕ್ಷಿಸಿದ ವಿಷಯವನ್ನು ಹೀಗೆ ತಿಳಿಸಿರುವರು-

ತುರುಗಳ ಕಾಯ್ದೋ ನೀ ಗೋವಿಂದ
ಬೆರಳಲೆತ್ತಿದ್ಯೋ ಗಿರಿಯ ಮುಕುಂದ
ಮರುಳು ಮಾಡಿದ್ಯೋಗೋಪಿಕೆಯರ
ವೃಂದ
ಹರುಷಗೈಸಿದೆ ಅನೇಕ ಪರಿಯಿಂದ

ಪುರಂದರದಾಸರು ''ಮರೆಯದಿರು ಮರೆಯದಿರು ಶ್ರೀಹರಿಯ'' ಪದ್ಯದಲ್ಲಿ-

ದೇವಕಿಯ ಬಂಧವನು ಪರಿದವನ
ಪೂತನಿಯ
ಜೀವರಸ ಪೀಂಟಿದವನ ಮಾವನನು
ಮಡುಹಿದನ
ಪಾವನ ತರಂಗಿಣಿಯ ಪದನಖದಿ
ಪಡೆದವನ
ಗೋವರ್ಧನೋದ್ಧರಣನ
ಮರೆಯದಿರು

-ಎಂದಿದ್ದಾರೆ. ಅವರೇ ತಮ್ಮ ಇನ್ನೊಂದು ಪದ್ಯದಲ್ಲಿ -

ಬಡಬ್ರಾಹ್ಮಣನವಲಕ್ಕಿಯ
ಬೇಡಿದ ಕೈಯ ತೋರೋ
ಕೊಡೆಮಾಡಿ ಗಿರಿಯೆತ್ತಿ
ಗೋವ್ಗಳ ಕಾಯ್ದ ಕೈಯ ತೋರೋ

-ಎಂಬುದಾಗಿ ಮಾರ್ಮಿಕವಾಗಿ ಬಣ್ಣಿಸಿದ್ದಾರೆ.

ಈ ಗೋವರ್ಧನೋದ್ಧರಣ ಪ್ರಸಂಗದಿಂದ ಭಗವಂತನು ಭಕ್ತವತ್ಸಲನೂ, ಭಕ್ತಾಪರಾಧ ಸಹಿಷ್ಣುವೂ ಆಗಿರುವುದನ್ನು ನಾವು ಮನಗಾಣಬಹುದು.

## ಭಗವದ್ಗೀತೆ

ಭಾರತಂ ಸರ್ವ ಶಾಸ್ತ್ರೇಷು ಭಾರತೇ ಗೀತಿಕಾ ವರಾ - ಕೂರ್ಮಪುರಾಣದ ಉಕ್ತಿಯಂತೆ ಸಕಲ ಶಾಸ್ತ್ರಗಳಲ್ಲಿ ಮಹಾಭಾರತವು ಶ್ರೇಷ್ಠವಾಗಿದೆ. ಇದರಲ್ಲಿ ಭಗವದ್ಗೀತೆ ಸಾರಭಾಗವಾಗಿದೆ ಮತ್ತು ಶ್ರೇಷ್ಠವೂ ಆಗಿದೆ.

ಶ್ರೀಮನ್ ಮಹಾಭಾರತವು ಪಂಚಮ ವೇದವೆನಿಸಿದೆ. ಮಹತ್ವದಲ್ಲಿ ಇತರ ವೇದಗಳಿಗಿಂತ ಮಿಗಿಲಾಗಿದೆ. (ವೇದಾದಪಿ ಪರಂ ಚಕ್ರೇ ಎಂಬಂತೆ) ಗೀತೆ ಅದರ ಉಪನಿಷತ್ ಎನಿಸಿದೆ. ಸಕಲ ಉಪನಿಷತ್ತುಗಳು ಗೋವುಗಳು, ಶ್ರೀಕೃಷ್ಣನೇ ಹಾಲು ಕರೆಯುವವನು. ಅರ್ಜುನನೇ ಕರು. ಗೀತಾಮೃತವೇ ಅವನು ಕರೆದ ಕ್ಷೀರ. ಸಜ್ಜನರು ಅದನ್ನು ಸೇವಿಸುತ್ತಾರೆ.

ಅರ್ಜುನನನ್ನು ನಿಮಿತ್ತಮಾಡಿ ಇಡೀ ಮಾನವ ಜನಾಂಗಕ್ಕೆ ಜ್ಞಾನ ಸಂದೇಶವನ್ನು ಶ್ರೀಕೃಷ್ಣ ನೀಡಿದ್ದಾನೆ. ಜೀವನದ ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನು ಈ ಗೀತೆಯಲ್ಲಿ ಕಂಡುಕೊಳ್ಳಬಹುದು.

ಇಂಥ ಭಗವದ್ಗೀತೆಯ ಸಂದೇಶವನ್ನು ನಮ್ಮ ಹರಿದಾಸರು ಕೂಡ ಜನಸಾಮಾನ್ಯರಿಗೆ ತಿಳಿಸಿಕೊಡಲು ಅದರ ಸಾರವನ್ನು ತಮ್ಮ ದಾಸಸಾಹಿತ್ಯದಲ್ಲಿ ಅಡಕಮಾಡಿ ಉಪಕರಿಸಿದ್ದಾರೆ. ದಾಸವಾಣಿಯಲ್ಲಿ ಅದನ್ನು ಆಸ್ವಾದಿಸುವುದೇ ಇಲ್ಲಿನ ಉದ್ದೇಶವಾಗಿದೆ.

''ಭಕ್ತ್ಯಾತ್ವನನ್ಯಯಾಶಕ್ಯ
ಅಹಮೇವಂ ವಿಧೋಽರ್ಜುನ''
(11-54)

ಇಲ್ಲಿ ಭಗವಂತನು ಭಕ್ತಿಯಿಂದ ಮಾತ್ರ ದೊರೆಯತಕ್ಕವನು ಎಂದಾಗಿ ತಿಳಿಸಿದ್ದಾರೆ.

ವಾದಿರಾಜ ಪೂಜ್ಯಚರಣರು ಇದನ್ನೇ ತಮ್ಮ ಸುಳಾದಿಯೊಂದರಲ್ಲಿ ಹೀಗೆ ತಿಳಿಸಿದ್ದಾರೆ.

ಯುಕ್ತಿಯ ಬಲದಿಂದಲೇ ಪೇಳುವುದಲ್ಲ
ಭಕ್ತ್ಯಾತ್ವನನ್ಯಯಾ ಶಕ್ಯ ಇದ್ದಂಗೆ ಇದು ಗೀ
ತೋಕ್ತಿಗಳನೆ ನೋಡು ಭಕ್ತ್ಯೈಕಲಭ್ಯ
ಇತ್ಯಾಗಮ ಪ್ರಯೋಗ ಮತ್ತೊಂದು
ನೀನಿನ್ನು ಬಯಸದೇ ಮನುಜ
ಭಕ್ತಿಯನು ಮಾಡು ಹಯವದನ ಚರಣದಿ

ಇಲ್ಲಿ ''ಭಕ್ತ್ಯೈಕಲಭ್ಯಃ ಪುರುಷೋತ್ತಮೋಹಿ'' ಎಂಬ ಪಂಚರಾತ್ರಾಗಮದ ಸಾರವನ್ನು ಕೂಡ ಹೇಳಿರುವುದು ಗಮನಾರ್ಹವಾಗಿದೆ.

ಮಾಮಾತ್ಮ ಪರದೇಹೇಷು
ಪ್ರದ್ವಿಷಂತೋಽಭ್ಯಸೂಯಕಾಃ
(16-18)

ಈ ಶ್ಲೋಕದ ಸಾರವನ್ನು ಕೆಳಗಿನ ಸುಳಾದಿಯಲ್ಲಿ ಸಂಗ್ರಹಿಸಿದ್ದಾರೆ.

ಮಾಮಾತ್ಮ ಪರದೇಹೇಷು ಹರಿಯೆಂದು
ಶ್ರೀಮದ್ಗೀತ ವಚನವ ಕಂಡು
ಹರಿಯನೋಡಿ
ಸಾಮಾನ್ಯ ವಚನವೆಂದರ್ಥಗಳ
ಧೀಮಂತರೆಲ್ಲಯೋಚಿಸಿಕೊಳ್ಳರೇ
ಕಾಮರಸಜನಕ ಹಯವದನ ಮ
ತ್ತಾಮಗನಿಗೊಲಿದು ಖಳರನೆ ಕೊಂದು

''ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ॥'' (7-7) ಇದರ ಸಾರವನ್ನು ಇಲ್ಲಿ ತೋರಿಸಿಕೊಟ್ಟಿರುತ್ತಾರೆ.

ಮತ್ತಃ ಪರತರಂ ನಾಸ್ತಿಯೆಂಬ ಕೃಷ್ಣ-
ನುಕ್ತಿಯ ನೋಡಿರೋ ಪುರು-
ಷೋತ್ತಮನು ತಾನೆಂಬ ಮತ್ತೊಂದು
ವಚನದರ್ಥವ ನೋಡಿರೋ ಸ।
ರ್ವೋತ್ತಮನು ಹರಿಯೆಂದು
ಮನಕೆ ತಂದುಕೊಳ್ಳಿರೋ
ಪಾರ್ಥನಿಗೆ ಹಯವದನ
ತೋರ್ದ ವಿಶ್ವರೂಪದಲಿ
ಸುತ್ತಮುತ್ತಿಹ ಸುರರ ತಲೆಯ
ನೋಡಿ ನಂಬಿರೋ ॥

ಗೋಪಾಲ ದಾಸರು ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ಕುರಿತು ಸುಳಾದಿಯೊಂದರಲ್ಲಿ ಹೀಗೆ ವಿವರಣೆ ನೀಡಿರುವರು.

ಒಂದು ರೂಪದಿ ಪಾರ್ಥನಿಗೆ ತತ್ತ್ವ ತಿಳಿಸುತ್ತ
ಬಂದ ಅರಿಗಳ ಅಸ್ತ್ರಗಳ ತಾನೆ ಒರೆಸುತಲಿಪ್ಪ
ಒಂದು ರೂಪದಲಿ ಅರ್ಜುನನನ ಆಲಿಂಗಿಸಿ
ಬಂದ ಆಯಾಸಗಳ ಬಿಡಿಸುತ ನಿಂದಿಪ್ಪ
ಒಂದು ರೂಪದಿ ದೇವದತ್ತ ಶಂಖವನೂದಿ
ತಂದೀವ ಬಲವ ಪ್ರತಿಕ್ಷಣಕೆ ಪಾರ್ಥನಿಗಿನ್ನು
ಮಂದ ಅಸುರರಿಗೆ ಇದೆ ಶಬ್ದದಿಂದ ಅವರ
ಕುಂದು ಮಾಡುವ ಬಲವ
ಒಂದು ರೂಪದಲಿನ್ನು
ಒಂದೊಂದನಂತಾನಂತರೂಪನಾಗಿ
ಮುಂದರಿದ ಕುರುಸೈನ್ಯವ
ಕೊಂದು ಕೊಂದ್ಹಾಕುತಿಹ
ಮಂದಾಕಿನೀ ಜನಕ ಗೋಪಾಲವಿಠಲಹೀ
ಗೆಂದು ತಿಳಿದ ರ್ಚಪಗೆ ಬಂಧನವ ಕಡಿವ

ಇಲ್ಲಿ ''ಅನೇಕ ಬಾಹೂದರ ವಕ್ತ್ರನೇತ್ರಂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್'' (11-16) ಈ ಶ್ಲೋಕದ ಸಾರವನ್ನು ಸಂಗ್ರಹಿಸಿರುವುದನ್ನು ಕಾಣಬಹುದಾಗಿದೆ.

ವ್ಯಾಸರಾಯರು ತಮ್ಮ ''ವೃತ್ತನಾಮ'' ಹೆಸರಿನ ಪದ್ಯದಲ್ಲಿ ಇಡೀ ಭಗವದ್ಗೀತೆಯ ಸಾರವನ್ನು ಸಂಗ್ರಹ ಮಾಡಿರುವುದನ್ನು ನೆನಪಿಸಿಕೊಳ್ಳಬಹುದು.

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ॥ (2-47) ಇದರ ಸಾರವನ್ನು ಹೀಗೆ ಸಂಗ್ರಹಿಸಿದ್ದಾರೆ.

ಕರ್ಮದಲ್ಲೇ ನಿನಗಧಿಕಾರ
ಫಲ ತಾ ದೂರ
ಧನಂಜಯಗೋಸ್ಕರ
ಜ್ಞಾನ ದೊಡ್ಡದು
XXXXXXXXXX
ವಿದ್ಯಾ ವಿನಯ ಸಂಪನ್ನೇ
ಬ್ರಾಹ್ಮಣೇ ಗವಿ ಹಸ್ತಿನಿ
ಶುನಿ ಚೈವ ಶ್ವಪಾಕೇ ಚ
ಪಂಡಿತಾಃ ಸಮದರ್ಶಿನಃ (5-18)
ಅಜನಲ್ಲಿ ದ್ವಿಜನಲ್ಲಿ ಗಜನಲ್ಲಿ
ಸಮನಾನಲ್ಲಿ
ಭಜಿಪರಮನದಲ್ಲಿ

ಎಂಬುದಾಗಿ ಸಂಗ್ರಹಿಸಿದ್ದಾರೆ.

ಶ್ರೀಕೃಷ್ಣನು ತನ್ನ ವಿಭೂತಿ ರೂಪಗಳನ್ನು ವಿವರಿಸುತ್ತ-

ರಾಮಃ ಶಸ್ತ್ರಭೃತಾಮಹಂ
ನಕ್ಷತ್ರಾಣಾಮಹಂ ಶಶೀ
ಅಕ್ಷರಾಣಾಮಕಾರೋಽಸ್ಮಿ
ವೈನತೇಯಶ್ಚಪಕ್ಷೀಣಾಮ್

ಎಂದಿದ್ದಾನೆ. ವ್ಯಾಸರಾಯರು ಇದನ್ನು-

ರಾಮನಾನಯ್ಯ ರಾಜರ ಗುಂಪಿನಲ್ಲಿ
ಸೋಮ ನಾನಯ್ಯ ತಾರಕಮಂಡಲದಲ್ಲಿ
ಅಕ್ಷರದೊಳಗೆ ಅಕಾರನು
ಪಕ್ಷಿಗಳಲ್ಲಿ ನಾನು ಗರುಡನು
ಸಕಲ ಜಾತಿಗಳಲ್ಲಿ ಶ್ರೇಷ್ಠತನದಲ್ಲಿ
ಎನ್ನರೂಪ ತಿಳಿಯಲ್ಲಿ

-ಎಂಬುದಾಗಿ ವರ್ಣಿಸಿ ತಿಳಿಸಿಕೊಟ್ಟಿದ್ದಾರೆ.

ಹೀಗೆ ದಾಸಸಾಹಿತ್ಯದಲ್ಲಿ ಶ್ರೀಮದ್ ಭಗವದ್ಗೀತೆಯ ಅಮೃತಮಯಜ್ಞಾನ ಸಂದೇಶವನ್ನು ನಮ್ಮ ಹರಿದಾಸರು ವರ್ಣಿಸಿ ತಿಳಿಸಿಕೊಟ್ಟಿರುವರು. ಅವರ ಈ ಉಪಕಾರಕ್ಕೆ ನಾವು - ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಯ -ಎಂದು ಹೇಳಬೇಕಷ್ಟೇ!

★★★★★



# ಗಾಯತ್ರೀ - ದಿವ್ಯಶಕ್ತಿಯ ಭವ್ಯಸ್ವರೂಪ

- ಕೂಡಲಿ ಜಗನ್ನಾಥಶಾಸ್ತ್ರಿ

ಏಕಂ ಸತ್ ವಿಪ್ರಾಃ ಬಹುಧಾ ವದನ್ತಿ - ಈ ಮಾತು ಬಹಳ ಪ್ರಾಚೀನವಾದುದು. ಚರಾಚರ ಜಗತ್ತನ್ನು ಸೃಷ್ಟಿಸುವ, ಪೋಷಿಸುವ, ನಾಶಮಾಡುವ ದಿವ್ಯಶಕ್ತಿಯು ಒಂದೇ ಆದರೂ, ಕಾರ್ಯನಿರ್ವಹಣೆ ಮತ್ತು ಸ್ವರೂಪಗಳ ದೃಷ್ಟಿಯಿಂದ ಅನೇಕವಾಗಿರುವುದನ್ನು ಭಾರತದ ಪ್ರಾಚೀನ ಋಷಿಗಳು ತಮ್ಮ ದಿವ್ಯ ದೃಷ್ಟಿಯಿಂದ ಅರಿತಿದ್ದರು. ಅವರು ತಾವು ಕಂಡ ಈ ಅವ್ಯಕ್ತಿ ಸತ್ತ್ವದಲ್ಲಿರುವ ಚೇತನ ಸ್ವರೂಪವನ್ನು ಚಿಂತಿಸಿ, ಅರಿತು ಅದನ್ನು ಪ್ರಕೃತಿ ಮತ್ತು ಪುರುಷ ಎಂದು ಕರೆದರು. ಅನಂತರ ಅವುಗಳ ಕಾರ್ಯನಿರ್ವಹಣೆಯ ಪ್ರಕ್ರಿಯೆಯನ್ನು ಅನುಸರಿಸಿ, ಆ ಪ್ರತಿಯೊಂದು ಶಕ್ತಿಯನ್ನು ಬೇರೆ ಬೇರೆ ಹೆಸರುಗಳಿಂದ ಕರೆದರು. ಅಂತಹವು ಗಳಲ್ಲಿ ಗಾಯತ್ರಿಯೂ ಒಂದು. ವೈದಿಕ ವಾಙ್ಮಯದಲ್ಲಿ ಗಾಯತ್ರಿ ಎನ್ನುವುದನ್ನು ಒಂದು ಮಂತ್ರದ ಹೆಸರಾಗಿ, ಒಬ್ಬ ದೇವತೆಯ ಹೆಸರಾಗಿ, ಒಂದು ಛಂದಸ್ಸಿನ ಹೆಸರಾಗಿ ವ್ಯವಹರಿಸುತ್ತಾರೆ.

**ಗಾಯತ್ರಿಮಂತ್ರ** : ಗಾಯತ್ರಿ ಎನ್ನುವುದು ಒಂದು ವಿಶಿಷ್ಟಮಂತ್ರದ ಹೆಸರು. ಯಾವ ವಾಕ್ಯವನ್ನೂ, ಅದರಲ್ಲಿರುವ ದೈವೀತತ್ತ್ವ ಮತ್ತು ದೈವೀಶಕ್ತಿಗಳನ್ನು ಅರ್ಥಮಾಡಿಕೊಂಡು ಪುನಃ ಪುನಃ ಹೇಳುವುದರಿಂದ ಸಾಧಕನಿಗೆ ಈ ವಿಶ್ವದ ರಹಸ್ಯ ಹಾಗೂ ತನಗೂ ಈ ವಿಶ್ವಕ್ಕೂ ಇರುವ ಸಂಬಂಧ; ಈ ವಿಶ್ವಜೀವನದಲ್ಲಿ ತನ್ನ ಪಾತ್ರ-ಪ್ರಮುಂತಾದುವುಗಳ ಅರಿವು ಉಂಟಾ ಗುತ್ತದೆಯೋ ಅದನ್ನು ಮಂತ್ರ ಎಂದು ಕರೆಯುತ್ತಾರೆ (ಮನನಾತ್ ತ್ರಾತಯತಿ ಇತಿ ಮಂತ್ರಃ). ಉಪಾಸನೆಯ ದೃಷ್ಟಿಯಿಂದ ಗಾಯತ್ರಿಮಂತ್ರವನ್ನು ಎರಡು ವಿಧವಾಗಿ ವಿಂಗಡಿಸುತ್ತಾರೆ. ಮೊದಲನೆಯದು ಸಂಧ್ಯಾಗಾಯತ್ರಿ; ಎರಡನೆಯದು ದೈವೀಗಾಯತ್ರಿ.

**ಸಂಧ್ಯಾಗಾಯತ್ರಿ**

ಓಂ ಭೂರ್ಭುವಸ್ಸುವಃ<br>
(ಸ್ವ - ಎಂಬ ಪ್ರಯೋಗವೂ ಇದೆ.)<br>
ತತ್ಸವಿತುರ್ವರೇಣ್ಯಂ ।<br>
ಭರ್ಗೋ ದೇವಸ್ಯ ಧೀಮಹಿ ।<br>
ಧಿಯೋ ಯೋನಃ ಪ್ರಚೋದಯಾತ್ ॥

ಇದು ಸಂಧ್ಯಾಗಾಯತ್ರಿ ಮಂತ್ರ. ಮೂರು ಸಂಧ್ಯಾಕಾಲಗಳಲ್ಲಿಯೂ ಈ ಮಂತ್ರವನ್ನು ಹೇಳಿಕೊಂಡು ಸೂರ್ಯನಿಗೆ ಅರ್ಘ್ಯವನ್ನು ಕೊಡುವುದರಿಂದ ಈ ಮಂತ್ರಕ್ಕೆ ಸಂಧ್ಯಾಗಾಯತ್ರಿ ಎಂಬ ಹೆಸರು ಬಂದಿದೆ. ವೇದಮಂತ್ರಗಳಲ್ಲಿ ಪ್ರತಿಯೊಂದಕ್ಕೂ ಒಬ್ಬೊಬ್ಬ ಋಷಿ, ದೇವತೆ, ಛಂದಸ್ಸು ಮತ್ತು ವಿನಿಯೋಗ - ಇವು ಉಕ್ತವಾಗಿವೆ. ಅದರಂತೆ ಸಂಧ್ಯಾಗಾಯತ್ರಿಗೆ ವಿಶ್ವಾಮಿತ್ರನೇ ಋಷಿ, ಸೂರ್ಯನೇ ದೇವತೆ; ಗಾಯತ್ರಿಛಂದಸ್ಸೇ ಇದರ ಛಂದಸ್ಸು; ಜಪ ಮತ್ತು ಹೋಮ ಹವನಗಳಲ್ಲಿ ಇದರ ವಿನಿಯೋಗ.

ವಿಶ್ವಾಮಿತ್ರ ಎಂಬುದು ಕೌಶಿಕ ರಾಜನ ಹೆಸರು. ಕೌಶಿಕ ರಾಜನಿಗೆ ವಿಶ್ವರಥ ಎಂಬ ಹೆಸರೂ ಇತ್ತು. ಕೌಶಿಕ ರಾಜನು ವಸಿಷ್ಠರ ಬಳಿ ಇದ್ದ ಕಾಮಧೇನುವನ್ನು ಬಲಾತ್ಕಾರವಾಗಿ ಪಡೆಯಲು ಹೋಗಿ ನಿಷ್ಫಲನಾಗುತ್ತಾನೆ. ಆಗ ಅವನು ವಸಿಷ್ಠರನ್ನು ಗೆಲ್ಲಲು ಬೇಕಾದ ದಿವ್ಯಾಸ್ತ್ರಗಳನ್ನು ಪಡೆಯಲು ನಿರ್ಧರಿಸಿ, ರಾಜ್ಯವನ್ನು ಮಗನಿಗೆ ವಹಿಸಿ, ವನಕ್ಕೆ ಹೋಗಿ ತಪಸ್ಸು ಮಾಡಿ ಬ್ರಹ್ಮನನ್ನು ಮೆಚ್ಚಿಸಿ, ವರಗಳ ರೂಪದಲ್ಲಿ ದಿವ್ಯಾಸ್ತ್ರಗಳನ್ನು ಪಡೆದು, ವಸಿಷ್ಠರ ಮೇಲೆ ಯುದ್ಧಮಾಡಲು ಬರುತ್ತಾನೆ. ಈ ಯುದ್ಧದಲ್ಲಿ ವಸಿಷ್ಠರು ತಮ್ಮ ಬ್ರಹ್ಮತೇಜಸ್ಸಿನ ಶಕ್ತಿಯನ್ನು ದಂಡದಲ್ಲಿ ಆವಾಹನೆ ಮಾಡಿ ಕೌಶಿಕನ ಮುಂದೆ ನಿಲ್ಲಿಸುತ್ತಾರೆ. ಈ ದಂಡವು ಕೌಶಿಕನು ಬಿಟ್ಟ ಎಲ್ಲ ಅಸ್ತ್ರಗಳನ್ನು ನಿಷ್ಫಲಗೊಳಿಸುತ್ತದೆ. ಕೌಶಿಕನು ಸೋಲುತ್ತಾನೆ. ಆಗ ಕೌಶಿಕನು ''ಧಿಗ್ಬಲಂ ಕ್ಷತ್ರಿಯ ಬಲಂ'' ಎಂದು ಬ್ರಹ್ಮತೇಜಸ್ಸನ್ನು ಪಡೆಯಲು ನಿರ್ಧರಿಸಿ, ಕಾಡಿಗೆ ಹೋಗಿ, ಆಶ್ರಮವನ್ನು ನಿರ್ಮಿಸಿಕೊಂಡು, ಬ್ರಹ್ಮನನ್ನು ಕುರಿತು ಪುನಃ ತಪಸ್ಸು ಮಾಡುತ್ತಾನೆ. ಹೀಗೆ ಸಾಧನೆಯ ಮಾರ್ಗದಲ್ಲಿ ಮುಂದುವರಿದಾಗ, ಕೌಶಿಕನಲ್ಲಿದ್ದ ತಾಮಸ ಮತ್ತು ರಾಜಸ ಗುಣಗಳು ಸಂಪೂರ್ಣವಾಗಿ ನಾಶವಾಗಿ, ಕೊನೆಗೆ ಅವನು ಸಾತ್ವಿಕ ತೇಜಸ್ಸಿನ ಮೂರ್ತಿಯಾಗುತ್ತಾನೆ. ಈ ಸಾತ್ವಿಕ ಸಾಧನೆ ಕೆಲವು ವರ್ಷಗಳವರೆಗೆ ಮುಂದುವರಿಯುತ್ತದೆ. ಕೊನೆಗೆ ಒಂದು ದಿನ ಕೌಶಿಕನು ಪೂರ್ಣವಾಗಿ ಬ್ರಹ್ಮರ್ಷಿ ಯಾಗುತ್ತಾನೆ. ಆಗ ಬ್ರಹ್ಮನು ಇತರ ದೇವತೆಗಳೊಂದಿಗೆ ಕೌಶಿಕನಿಗೆ ಪ್ರತ್ಯಕ್ಷನಾಗಿ-

ಬ್ರಹ್ಮರ್ಷೇಃ ಸ್ವಾಗತಂ ತೇಽಸ್ತು<br>
ತಪಸಾಸ್ಮನುತೋಷಿತಾಃ ।<br>
ಬ್ರಹ್ಮಣ್ಯಂ ತಪಸೋಗ್ರೇಣ<br>
ಪ್ರಾಪ್ತವಾನಸಿ ಕೌಶಿಕ ॥

(ಹೇ ಬ್ರಹ್ಮರ್ಷಿ, ಸ್ವಾಗತ. ನಿನ್ನ ತಪಸ್ಸಿನಿಂದ ಸಂತೋಷಗೊಂಡಿದ್ದೇನೆ. ನೀನು ಉಗ್ರ ತಪಸ್ಸಿನಿಂದ ಬ್ರಹ್ಮಜ್ಞಾನಿಯಾಗಿದ್ದೀಯೆ.) ಎನ್ನುತ್ತಾನೆ. ಆಗ ಕೌಶಿಕನು - 'ನಾನು ಬ್ರಹ್ಮಜ್ಞಾನಿಯಾಗಿರುವುದು ನಿಜವಾದರೆ, ಓಂಕಾರವೂ, ವೇದವಾಙ್ಮಯವೂ, ವೈದಿಕ ಕ್ರಿಯೆಗಳಲ್ಲಿ ದೇವತೆಗಳಿಗೆ ಆಹುತಿಯನ್ನು ಅರ್ಪಿಸುವ ಅಧಿಕಾರವೂ ನನಗೆ ಬರಲಿ. ಅಷ್ಟೇ ಅಲ್ಲ ಬ್ರಹ್ಮರ್ಷಿಯಾದ ವಸಿಷ್ಠರು ನನ್ನನ್ನು ಬ್ರಹ್ಮರ್ಷಿ ಎಂದು ಒಪ್ಪಿ, ನನ್ನನ್ನು ಅವರು ಬ್ರಹ್ಮರ್ಷಿ ಎಂದು ಕರೆಯಬೇಕು' ಎಂದು ಸಾತ್ವಿಕ ಪ್ರಾರ್ಥನೆಯನ್ನು ಮಾಡುತ್ತಾನೆ. ಬ್ರಹ್ಮನೂ ದೇವತೆಗಳೂ ''ತಥಾಸ್ತು'' ಎನ್ನುತ್ತಾರೆ.

ಅನಂತರ ದೇವತೆಗಳು ವಸಿಷ್ಠಾಶ್ರಮಕ್ಕೆ ಬಂದು, ಅವರೊಂದಿಗೆ ಕೌಶಿಕನ ಆಶ್ರಮಕ್ಕೆ ಬರುತ್ತಾರೆ. ಆ ವೇಳೆಗೆ ಅಲ್ಲಿಗೆ ಬ್ರಹ್ಮರ್ಷಿಗಳೂ, ದೇವರ್ಷಿಗಳೂ, ಮಹರ್ಷಿಗಳೂ ಬಂದು ಸೇರಿರುತ್ತಾರೆ. ಆಗ ವಸಿಷ್ಠರು ಎಲ್ಲರಿಗೂ ಸ್ಪಷ್ಟವಾಗಿ ಕೇಳುವಂತೆ, ಕೌಶಿಕನನ್ನು ಉದ್ದೇಶಿಸಿ-

ಬ್ರಹ್ಮರ್ಷಿಸ್ತ್ವಂ ನಸಂದೇಹಃ ಸರ್ವಂ ಸಂಪತ್ಸ್ಯತೇ ತವ'' (ಎಲೈ, ನೀನು ಈಗ ಬ್ರಹ್ಮರ್ಷಿಯಾಗಿದ್ದೀಯೆ. ಇದರಲ್ಲಿ ಸಂದೇಹವಿಲ್ಲ. ಇದನ್ನು ವೃದ್ಧಿಸಿಕೊಳ್ಳಲು ಬೇಕಾಗುವ ಎಲ್ಲ ಶಕ್ತಿಗಳೂ ನಿನಗೆ ಪ್ರಾಪ್ತವಾಗಿವೆ) ಎಂದು ಹೇಳಿ, ಆಶೀರ್ವದಿಸುತ್ತಾರೆ. ಕೌಶಿಕನು ಇದರಿಂದ ತೃಪ್ತನಾಗುತ್ತಾನೆ.

ಈ ಘಟನೆಯಿಂದ ಕೌಶಿಕನಲ್ಲಿ ವಿಶಿಷ್ಟ ಪರಿವರ್ತನೆ ಯುಂಟಾಗುತ್ತದೆ. ಆತನು ಇನ್ನು ಮುಂದೆ ತನ್ನ ತಪಶ್ಶಕ್ತಿಯನ್ನು ಜಗತ್ಕಲ್ಯಾಣಕ್ಕಾಗಿ ವಿನಿಯೋಗಿಸಲು ನಿರ್ಧರಿಸುತ್ತಾನೆ. ಇದರಿಂದ ಈವರೆಗೂ ಕೌಶಿಕನಾಗಿದ್ದ ಅವನು 'ವಿಶ್ವಾಮಿತ್ರ' (ಜಗತ್ತಿಗೆ ಕಲ್ಯಾಣವನ್ನುಂಟು ಮಾಡುವವನು) ನಾಗುತ್ತಾನೆ. ವಿಶ್ವಾಮಿತ್ರನು ತನ್ನ ಉದ್ದೇಶ ಸಾಧನೆಗಾಗಿ ಸೂರ್ಯ ಮಂಡಲದಲ್ಲಿ ಬೆಳಕಿನ ರೂಪದಲ್ಲಿದ್ದು, ಲೋಕದ ಚರಾಚರ ವಸ್ತುಗಳಿಗೂ ಚೇತನ ರೂಪವಾಗಿರುವ ದಿವ್ಯ ಶಕ್ತಿಯನ್ನು ಕುರಿತು ತಪಸ್ಸು ಮಾಡುತ್ತಾನೆ. ಆಗ ಸೂರ್ಯನ ತೇಜೋ ಶಕ್ತಿಯು ಅವನ ಮನೋಮಯದಲ್ಲಿ ಮಂತ್ರಾತ್ಮಕವಾಗಿ ದರ್ಶನ ಕೊಡುತ್ತದೆ. ವಿಶ್ವಾಮಿತ್ರನು ತಾನು ಕಂಡ ವ್ಯಾಹೃತಿ ತ್ರಯಾತ್ಮಕವೂ, ತ್ರಿಪದಾತ್ಮಕವೂ ಆದ ಮಂತ್ರವನ್ನು ಪುನರುಚ್ಚರಿಸಿ ಅವನ್ನು ಜಗತ್ಕಲ್ಯಾಣಕ್ಕಾಗಿ, ಸಾಧಕರ ಉದ್ಧಾರಕ್ಕಾಗಿ ಪ್ರಚುರಪಡಿಸುತ್ತಾನೆ. ಇದೇ ''ಓಂ ಭೂರ್ಭುವಸ್ಸುವಃ (ಸ್ವಃ) ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯಧೀಮಹಿ ಧಿಯೋ ಯೋ ನಃ ಪ್ರಚೋದಯಾತ್'' - ಎಂಬ ಮಂತ್ರ.

ಈ ಮಂತ್ರದಲ್ಲಿ ಓಂ ಭೂರ್ಭುವಸ್ಸುವಃ ಎಂಬುದು ಮೂರು ವ್ಯಾಹೃತಿಗಳಿಂದ ಕೂಡಿದ ಪಾದ. ತತ್ಸವಿತುರ್ವರೇಣ್ಯಂ ಎಂಬುದು ಮೊದಲನೆಯ ಪಾದ. ಭರ್ಗೋ ದೇವಸ್ಯ ಧೀಮಹಿ ಎಂಬುದು ಎರಡನೆಯ ಪಾದ; ಧಿಯೋ ಯೋ ನಃ ಪ್ರಚೋದಯಾತ್ - ಎಂಬುದು ಮೂರನೆಯ ಪಾದ. ಓಂ ಎಂಬುದು ಪ್ರಣವ. ಇದು ನಿರ್ಗುಣನಾದ ಪರಬ್ರಹ್ಮನನ್ನು ಸಂಕೇತಿಸುತ್ತದೆ. ಭೂಃ ಭುವಃ ಸುವಃ (ಸ್ವಃ) ಈ ಮೂರನ್ನು ವ್ಯಾಹೃತಿಗಳು ಎನ್ನುತ್ತಾರೆ. ವ್ಯಾಹೃತಿ ಎಂದರೆ ಅಜ್ಞಾನವನ್ನು ನಿವಾರಿಸಿ ವಿರಾಟ್ ಶಕ್ತಿಯಾದ ಪರಬ್ರಹ್ಮನ ಕಡೆಗೆ ಸಾಧಕನ ಗಮನವನ್ನು ಸೆಳೆದೊಯ್ಯುವ ದಿವ್ಯಶಕ್ತಿ ಎಂದರ್ಥ. ಈ ಮೂರು ಪದಗಳ ಪುನಶ್ಚರಣೆಯಿಂದ ಈಶ್ವರ, ಜೀವ, ಪ್ರಕೃತಿ - ಇವುಗಳಿಗಿರುವ ಪರಸ್ಪರ ಸಂಬಂಧ ಜ್ಞಾನವು ಸಾಧಕನಿಗೆ ಉಂಟಾಗುತ್ತದೆ. ತತ್ ಎಂದರೆ ಪರಬ್ರಹ್ಮನ ಸ್ವರೂಪನಾದ, ಸವಿತುಃ ಸೂರ್ಯನು, ವರೇಣ್ಯಂ ಎಂದರೆ ಉಪಾಸಿಸಬೇಕಾದ ದಿವ್ಯಶಕ್ತಿಯಾಗಿದ್ದಾನೆ. ಭರ್ಗೋದೇವಸ್ಯ ಧೀಮಹಿ - ಇದು ಎರಡನೆಯ ಪಾದ. ಭರ್ಗಃ ಎಂದರೆ ಅಜ್ಞಾನವನ್ನು ನಾಶಮಾಡುವ, ದೇವಸ್ಯ ಸೂರ್ಯದೇವನನ್ನು; ಧೀಮಹಿ ಧ್ಯಾನಿಸೋಣ. ಧಿಯೋ ಯೋ ನಃ ಪ್ರಚೋದಯಾತ್ - ಇದು ಮೂರನೆಯ ಪಾದ. ಯಃ ಆ ಸೂರ್ಯನು ನಃ ನಮ್ಮ, ಧಿಯಃ ಬುದ್ಧಿಶಕ್ತಿಯನ್ನು ಪ್ರಚೋದಯಾತ್ - ಒಳ್ಳೆಯದರ ಕಡೆಗೆ ಪ್ರೇರೇಪಿಸಲಿ. ಈ ಬ್ರಹ್ಮಾಂಡವನ್ನು ಸೃಷ್ಟಿಸಿದ ನಿರ್ಗುಣನಾದ ಪರಬ್ರಹ್ಮನ ಸದ್ಗುಣರೂಪನಾದ ಸೂರ್ಯನು ನಾವು ಉಪಾಸಿಸಬೇಕಾದ ದಿವ್ಯಶಕ್ತಿಯಾಗಿದ್ದಾನೆ. ನಮ್ಮ ಅಜ್ಞಾನದ ನಿವಾರಣೆಗಾಗಿ ಅವನನ್ನು ಧ್ಯಾನಿಸೋಣ. ಆ ಸೂರ್ಯದೇವನು ನಮ್ಮ ಬುದ್ಧಿ ಶಕ್ತಿಯನ್ನು ಋಜುಮಾರ್ಗದಲ್ಲಿ ಪ್ರೇರೇಪಿಸಲಿ - ಎಂಬುದು ಗಾಯತ್ರಿ ಮಂತ್ರದ ಸಾರಾಂಶ. ಸಂಧ್ಯಾಕಾಲಗಳಲ್ಲಿ ಸೂರ್ಯನಿಗೆ ಅರ್ಘ್ಯವನ್ನು ಕೊಡುವಾಗ ಮತ್ತು ಸಂಧ್ಯಾವಂದನೆಯಲ್ಲಿ ಮುಖ್ಯ ಉಪಾಸನಾಮಂತ್ರವಾಗಿ ಈ ಗಾಯತ್ರಿಯನ್ನು ಹೇಳುವುದರಿಂದ ಇದನ್ನು ಸಂಧ್ಯಾಗಾಯತ್ರಿ ಎಂದು ವ್ಯವಹರಿಸುತ್ತಾರೆ.



ಈ ಸಂಧ್ಯಾಗಾಯತ್ರಿಯ ಮತ್ತೊಂದು ಮಹತ್ವವೆಂದರೆ, ಇದರ ಪ್ರತಿಯೊಂದು ವರ್ಣವೂ ಅನೇಕ ವೈಶಿಷ್ಟ್ಯಗಳಿಂದ ಕೂಡಿರುವುದು. ಸಂಧ್ಯಾಗಾಯತ್ರಿಯಲ್ಲಿ 24 ವರ್ಣಗಳಿವೆ. ಪ್ರತಿಯೊಂದು ವರ್ಣಕ್ಕೂ ಪ್ರತ್ಯೇಕವಾಗಿ, ವಾಮದೇವ, ಅತ್ರಿ - ಮೊದಲಾದ 24 ಜನ ಋಷಿಗಳೂ; ಗಾಯತ್ರಿ, ಉಷ್ಣಿಕ್ - ಮೊದಲಾದ 24 ಛಂದಸ್ಸೂ; ಅಗ್ನಿ, ಪ್ರಜಾಪತಿ - ಮೊದಲಾದ 24 ಜನ ವರ್ಣ ದೇವತೆಗಳೂ; ವಾಮದೇವಿ, ಪ್ರಿಯಾ - ಮೊದಲಾದ 24 ವರ್ಣಶಕ್ತಿಗಳೂ; ಚಂಪಕ - ಮೊದಲಾದ 24 ವರ್ಣ ರೂಪಗಳೂ; ಪೃಥ್ವೀ, ಜಲ - ಮೊದಲಾದ ವರ್ಣತತ್ತ್ವಗಳೂ; ಸುಮುಖ, ಸಂಪುಟ - ಮೊದಲಾದ ವರ್ಣಮುದ್ರೆಗಳೂ ಇವೆ.

### ದೈವೀ ಗಾಯತ್ರಿ

ದೇವೀ ಗಾಯತ್ರಿಯು ಸಂಧ್ಯಾಗಾಯತ್ರಿಯಿಂದ ಸ್ವಲ್ಪ ಭಿನ್ನವಾಗಿದೆ. ಇದರಲ್ಲಿಯೂ ಮೂರು ಪಾದಗಳಿವೆ. ಮೊದಲನಯ ಪಾದದ ಕೊನೆಯಲ್ಲಿ ವಿದ್ಮಹೆ ಎಂದೂ, ಎರಡನೆಯ ಪಾದದ ಕೊನೆಯಲ್ಲಿ ಧೀಮಹಿ ಎಂದೂ, ಮೂರನೆಯ ಪಾದದ ಕೊನೆಯಲ್ಲಿ ಪ್ರಚೋದಯಾತ್ ಎಂಬುದೂ ಪ್ರಾರ್ಥನೆಯನ್ನೂ ಸಂಕೇತಿಸುತ್ತದೆ. ಉದಾಹರಣೆಗೆ - ತತ್ಪುರುಷಾಯ ವಿದ್ಮಹೇ । ವಕ್ರತುಂಡಾಯ ಧೀಮಹಿ । ತನ್ನೋದಂತೀ ಪ್ರಚೋದಯಾತ್ - ಇದು ಗಣಪತಿ ಗಾಯತ್ರಿ ಮಂತ್ರ. ತತ್ಪುರುಷಾಯ ವಿದ್ಮಹೇ - ಎಲೆ ಗಣಪತಿಯೇ ನಾನು ನಿರ್ಗುಣನಾದ ನಿನ್ನನ್ನು ಚಿಂತನೆ ಮಾಡುತ್ತೇನೆ; ವಕ್ರತುಂಡಾಯ ಧೀಮಹಿ - ನಾನು ನಿನ್ನನ್ನು ವಕ್ರತುಂಡ ಮುಂತಾದ ಸಗುಣರೂಪಗಳಿಂದ ಧ್ಯಾನಿಸುತ್ತೇನೆ. ತನ್ನೋದಂತೀ ಪ್ರಚೋದಯಾತ್ - ಆ ಗಣಪತಿಯು ನಮ್ಮನ್ನು ಋಜುಮಾರ್ಗದಲ್ಲಿ ಪ್ರಚೋದಿಸಲಿ - ಎಂದು ಅರ್ಥ. ಹೀಗೆಯೇ ವೇದಮಾತಾ ಚ ವಿದ್ಮಹೇ, ಬ್ರಹ್ಮ ಪತ್ನೀ ಚ ಧೀಮಹಿ, ತನ್ನೋ ಸರಸ್ವತೀ ಪ್ರಚೋದಯಾತ್ (ಸರಸ್ವತಿ ಗಾಯತ್ರಿ) ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ, ತನ್ನೋ ವಿಷ್ಣು ಪ್ರಚೋದಯಾತ್ (ವಿಷ್ಣುಗಾಯತ್ರಿ) ಇತ್ಯಾದಿ. ಎಷ್ಟು ಪ್ರಮುಖವಾದ ಸಗುಣರೂಪದ ದೈವೀ ರೂಪಗಳಿವೆಯೋ ಅವುಗಳೆಲ್ಲಕ್ಕೂ ಪ್ರತ್ಯೇಕವಾದ ಗಾಯತ್ರಿ ಮಂತ್ರಗಳಿವೆ. ಅರ್ಚನಾ ರೂಪದ ದೈವೀ ಶಕ್ತಿಗಳನ್ನು ಕುರಿತು ಈ ಗಾಯತ್ರಿಯು ರಚಿತವಾಗಿರುವುದರಿಂದ ಇದನ್ನು ದೈವೀ ಗಾಯತ್ರಿ ಎಂದು ವ್ಯವಹರಿಸುತ್ತಾರೆ.

### ಸಗುಣ ಗಾಯತ್ರಿ

ಗಾಯತ್ರಿಯನ್ನು ಶಕ್ತಿರೂಪಿಣಿಯಾಗಿಯೂ ಪೂಜಿಸಲಾಗುತ್ತಿದೆ. ಸಾಮಾನ್ಯ ಜನರಿಗೆ ಅವಳ ರೂಪವು ಚೆನ್ನಾಗಿ ವ್ಯಕ್ತವಾಗುವ ರೀತಿಯಲ್ಲಿ ರಚಿಸಿದ ಅನೇಕ ಧ್ಯಾನಶ್ಲೋಕಗಳಿವೆ. ಅವುಗಳಲ್ಲಿ ಒಂದು ಶ್ಲೋಕ ಹೀಗಿದೆ-

ಮುಕ್ತಾವಿದ್ರುಮಹೇಮನೀಲ
ಧವಲಚ್ಛಾಯೈರ್ಮುಖೈಸ್ತ್ರೀಕ್ಷಣೈಃ
ಯುಕ್ತಾಮಿಂದು ಕಲಾನಿಬದ್ಧಮಕುಟಾಂ
ತತ್ವಾರ್ಥ ವರ್ಣಾತ್ಮಿಕಾಂ
ಗಾಯತ್ರೀಂ ವರದಾಭಯಾಂಕುಶ
ಕಶಾಃ ಶುಭ್ರಂ ಕಪಾಲಂ ಗುಣಂ
ಶಂಖಂ ಚಕ್ರಮಥಾರವಿಂದಯುಗಳಂ
ಹಸ್ತೈರ್ವಹಂತೀಂ ಭಜೇ

(ಈ ದೇವಿಗೆ ದೇಹ ಒಂದು ಮತ್ತು ಐದು ಮುಖಗಳಿವೆ. ಈ ಐದು ಮುಖಗಳು, ಮುಕ್ತ, ವಿದ್ರುಮ (ಹವಳ) ಹೇಮ (ಚಿನ್ನ) ನೀಲ, ಧವಳ - ಈ ಐದು ವರ್ಣಗಳಿಂದ ಕಾಂತಿಯುಕ್ತವಾಗಿವೆ. ಇವಳಿಗೆ ಐದು ಮುಖದಲ್ಲಿಯೂ ಮೂರು ಮೂರು ನೇತ್ರಗಳಿವೆ. ಇವಳು ಚಂದ್ರಕಲೆಯಿಂದ ಕೂಡಿದ ಕಿರೀಟವನ್ನು ಧರಿಸಿದ್ದಾಳೆ. ತನ್ನ ಹಸ್ತಗಳಲ್ಲಿ ಅಭಯ, ವರದಮುದ್ರಾ, ಅಂಕುಶ, ಪಾಶ, ಶುಭ್ರಕಪಾಲ, ಗುಣ, ಶಂಖ, ಚಕ್ರ, ಕಮಲದ್ವಯ - ಇವನ್ನು ಧರಿಸಿದ್ದಾಳೆ. ಈ ದೇವಿಯನ್ನು ನಾನು ಧ್ಯಾನಮಾಡುತ್ತೇನೆ.)

ಈ ದೇವಿಗೆ ಸಂಬಂಧಿಸಿದ ಧ್ಯಾನ ಶ್ಲೋಕಗಳನ್ನು ಅನುಸರಿಸಿ ಕೆತ್ತಿದ ವಿಗ್ರಹಗಳನ್ನೂ, ಬರೆದ ಚಿತ್ರಗಳನ್ನೂ ಪೂಜಿಸುತ್ತಾರೆ. ಈ ಗಾಯತ್ರಿದೇವಿಯ ಉಪಾಸನೆಗಾಗಿ ಇವಳಿಗೆ ಸಂಬಂಧಿಸಿದ ಕವಚವಿದೆ; ಹೃದಯವಿದೆ; ಸ್ತೋತ್ರಗಳೂ ಇವೆ. ಅರ್ಚನೆಗಾಗಿ ಗಾಯತ್ರಿ ಅಷ್ಟೋತ್ತರ ಶತನಾಮಾವಳಿ ಇದೆ; ಸಹಸ್ರನಾಮಾವಳಿಯೂ ಇದೆ. ಇವಳತೃಪ್ತಿಗಾಗಿ, ಪ್ರಸನ್ನತೆಗಾಗಿ ಹೋಮ ಹವನಗಳೂ ಇವೆ. ಗಾಯತ್ರಿ ಸಹಸ್ರನಾಮವು ಅಕ್ಷರಾನುಕ್ರಮಣಿಕೆಯ ಕ್ರಮದಲ್ಲಿರುವುದು ಒಂದು ವಿಶೇಷ. ತಾಂತ್ರಿಕ ಕ್ರಮದ ಉಪಾಸಕರಿಗಾಗಿ ಗಾಯತ್ರಿಯಂತ್ರವೂ ಇದೆ. ಈ ಯಂತ್ರದಲ್ಲಿ ಸಂಧ್ಯಾಗಾಯತ್ರಿಯ ಮಂತ್ರವನ್ನೇ ಬೀಜಾಕ್ಷರಗಳಾಗಿ ಬಳಸಿದ್ದಾರೆ. ಈ ಯಂತ್ರದ ಆರಾಧನೆಯಿಂದ ಶ್ರೀದೇವಿಯು ಶೀಘ್ರವಾಗಿ ಅನುಗ್ರಹ ಮಾಡುತ್ತಾಳೆ ಎಂಬ ನಂಬಿಕೆಯಿದೆ.

ವೇದವಾಙ್ಮಯದಲ್ಲಿ ಛಂದಸ್ಸಿಗೂ ವಿಶಿಷ್ಟಸ್ಥಾನವಿದೆ. ಗಾಯತ್ರಿ ಛಂದಸ್ಸಿಗೆ ಈ ಗಾಯತ್ರಿ ದೇವಿಯೇ ಅಧಿದೇವತೆ. ವೇದಗಳು ಗಾಯತ್ರಿಯನ್ನು ''ಗಾಯತ್ರೀಛಂದಸಾಂ ಮಾತಾ'', ''ವೇದ ಜನನೀ'' ಎಂದು ಹೊಗಳುತ್ತಿವೆ. ಅಭಿಭೂಃ (ಸರ್ವ ಪಾಪಗಳನ್ನೂ ನಾಶಮಾಡುವ) ಆದ ಗಾಯತ್ರಿಯು ಜಗತ್ತಿಗೆ ಸನ್ಮಂಗಳವನ್ನು ಉಂಟುಮಾಡಲಿ. ★

# ಆಪಸ್ತಂಬ ಸೂತ್ರ

- ರಘುಸುತ.

ಆಪಸ್ತಂಬ ಋಷಿಯು ಓರ್ವ ಪ್ರಾಚೀನ ವೈದಿಕ ಮಹರ್ಷಿ. ಈತನು ಮಹಾನ್ ಯೋಗಿಯೂ, ವೇದ - ವೇದಾಂಗ ಶಾಸ್ತ್ರಗಳ ಮರ್ಮಜ್ಞನೂ, ಪರಮದಯಾಳುವೂ ಆಗಿರುವ ಸಂತಶೇಷ್ಠನು. ಯಾಜ್ಞವಲ್ಕ್ಯನು ತನ್ನ ಸ್ಮೃತಿಯಲ್ಲಿ ಈತನನ್ನು ವಿಶಿಷ್ಟ ಧರ್ಮಶಾಸ್ತ್ರಕಾರರಲ್ಲಿ ಓರ್ವನೆಂದು ತಿಳಿಸಿ, ಈತನನ್ನು ಸಮ್ಮಾನಿಸಿದ್ದಾನೆ. ಈತನನ್ನು ಕೃಷ್ಣಯಜುರ್ವೇದದ ಆಚಾರ್ಯರಲ್ಲಿ ಮುಖ್ಯನಾದವನೆಂದು ಮಾನ್ಯ ಮಾಡಲಾಗಿದೆ. ಗೋತ್ರ ನಿರ್ದೇಶಕ ಪಾಣಿನಿಯ 'ವಿದಾದಿ' ಗಣ ಸೂತ್ರದಲ್ಲಿ (4 / 1 / 104) ಈತನ ಹೆಸರು ಸೇರಿಸಲಾಗಿದೆ. ನಮ್ಮಲ್ಲಿ ಅನೇಕರು ಹೇಳುವ ಪ್ರವರದಲ್ಲಿ 'ಆಪಸ್ತಂಬ ಸೂತ್ರಃ, ಯಜುಶ್ಶಾಖ್ಯಾಧ್ಯಾಯಿ' ಎಂದಿದ್ದು, ಈತನ ಹೆಸರನ್ನು ಪ್ರತಿದಿನ ನಾವು ಸ್ಮರಿಸುತ್ತಿದ್ದೇವೆ. ಈತನ ಗೋತ್ರದವರು ದಕ್ಷಿಣ ಭಾರತದಲ್ಲಿ ಬಹಳಷ್ಟು ಕಡೆ ಇದ್ದಾರೆ. ಇತರೇ ಮಹರ್ಷಿಗಳಂತೆ ಈತನು ಸರ್ವಜ್ಞನೂ, ದಿವ್ಯದೃಷ್ಟಿಯನ್ನು ಹೊಂದಿದ್ದವನೂ ಆಗಿದ್ದನು. ಕೃಪಾಳುವಾದ ಈತನು ಕಶ್ಯಪ ಪತ್ನಿ ದಿತಿಯು ನಡೆಸಿದ ಪುತ್ರಕಾಮೇಷ್ಟಿ ಯಾಗಕ್ಕೆ ಓರ್ವ ಮುಖ್ಯ ಆಚಾರ್ಯನಾಗಿದ್ದನು.

ರಾಜಾ ನಾಭಾಗನ ಸಮಯದಲ್ಲಿ ಈತನ ದೀರ್ಘಕಾಲದ ಜಲಸಮಾಧಿಯ ಬಗ್ಗೆ ಕಥೆಯೊಂದಿದ್ದು, ಇದು ಪುರಾಣಗಳಲ್ಲಿ ಕಂಡು ಬಂದಿದೆ. ಈತನು ಎಲ್ಲರ ಬಗ್ಗೆಯೂ ಪ್ರೀತ್ಯಾದರಗಳನ್ನು ತೋರುತ್ತಿದ್ದನು. ಈತನ ತ್ಯಾಗ, ತಪಸ್ಸು, ದೀನ ದುಃಖಿಗಳ ಬಗ್ಗೆ ಕರುಣೆ, ಧರ್ಮಾಚರಣೆ ಹಾಗೂ ಗೋಭಕ್ತಿಯನ್ನು ಕುರಿತಾದ ಕಥೆಯೊಂದು ಸ್ಕಂದಪುರಾಣದ ರೇವಾಖಂಡದಲ್ಲಿದೆ.

ಒಮ್ಮೆ ಈತನು ವಿಶಿಷ್ಟ ರೀತಿಯ ತಪಸ್ಸು ಮಾಡಲು ನರ್ಮದಾ ಮತ್ತು ಮತ್ಸ್ಯಾ ನದಿಗಳ ಸಂಗಮದಲ್ಲಿ ಜಲ ಸಮಾಧಿಯಲ್ಲಿದ್ದನು. ಮೀನ್ಗಾರರು ಮೀನುಗಳನ್ನು ಹಿಡಿಯಲು ಬಲೆಯನ್ನು ಬೀಸಿದರು. ಆಗ ಮೀನುಗಳ ಜೊತೆಯಲ್ಲಿ ಸಮಾಧಿಸ್ಥನಾದ ಆಪಸ್ತಂಬನನ್ನೂ ಹೊರಗೆಳೆದರು. ಬಲೆಯಲ್ಲಿದ್ದ ಋಷಿಯನ್ನು ನೋಡಿ, ಮೀನ್ಗಾರರು ಭಯಗೊಂಡು ತಮ್ಮಿಂದ ಅಪರಾಧವಾಗಿದೆ ಮನ್ನಿಸೆಂದು ಬೇಡಿಕೊಂಡರು.

ಆದರೆ ಋಷಿಯ ಕಣ್ಣಿಗೆ ಬಿದ್ದಿದ್ದು ನೀರಿನಿಂದ ಹೊರತೆಗೆದ ಮೀನುಗಳ ಒದ್ದಾಟ. ಆತನ ಹೃದಯದಲ್ಲಿ ಮೀನುಗಳ ಬಗ್ಗೆ ಕರುಣೆ ಉಕ್ಕಿತು. ಆಗ ಆತನು ಹೇಳಿದನು,

ಅಯ್ಯೋ! ಇದೆಂತಹ ಸ್ಥಿತಿ! ಮಾನವನು ತನ್ನ ಸುಖಕ್ಕಾಗಿ ದುಃಖದಲ್ಲಿರುವ ಪ್ರಾಣಿಗಳ ಕಡೆ ಗಮನವೇ ನೀಡುವುದಿಲ್ಲವಲ್ಲ! ಇದೆಂತಹ ಕ್ರೌರ್ಯ! ಇದು ಪ್ರಾಣಿಗಳ ಮೇಲಿನ ನಿರ್ದಯತೆಯ ಅತ್ಯಾಚಾರವಲ್ಲವೆ? ಮಾನವನು ತನ್ನ ಸ್ವಾರ್ಥಕ್ಕಾಗಿ ಈ ರೀತಿ ಪ್ರಾಣಿಗಳನ್ನು ಬಲಿಕೊಡುವುದೆ? ಸ್ವಾರ್ಥಿಯಾದವನು ಜ್ಞಾನಿಯಾದರೂ, ತಪಸ್ಸು ಮಾಡಿದರೂ ದುಃಖದಿಂದಿರುವ ಪ್ರಾಣಿಗಳು ಎಲ್ಲಿ ಹೋದಾವು, ಯಾರಿಗೆ ಶರಣಾದಾವು? ತಾನೋರ್ವನೆ ಸುಖವನ್ನು ಅನುಭವಿಸಬೇಕೆಂದುಕೊಳ್ಳುವ ವ್ಯಕ್ತಿಯು ಮಹಾ ಪಾಪಿಯಾಗುವನು. ಸಕಲ ಜೀವಿಗಳ ದುಃಖವನ್ನು ನಾನೊಬ್ಬನೇ ಅನುಭವಿಸುವುದಕ್ಕೆ ಮಾರ್ಗವೇನಾದರೂ ಇದೆಯೆ? ನನ್ನಲ್ಲಿನ ಅಲ್ಪಸ್ವಲ್ಪ ಪುಣ್ಯವನ್ನೂ ದೀನ ದುಃಖಿಗಳಿಗೆ ನೀಡುವ ಸದವಕಾಶ ಕೊಡು ದೇವ, ಅವರ ಪಾಪವನ್ನು ನಾನು ಅನುಭವಿಸುವಂತೆ ಮಾಡು ದೇವರೆ!''

ಕೋ ನು ಮೇ ಸ್ವಾದುಪಾಯೋ ಹಿ
ಯೇನಾಹಂ ದುಃಖಿತಾತ್ಮನಾಂ
ಅಂತಃ ಪ್ರವಿಶ್ಯ ಭೂತಾನಾಂ
ಭವೇಯಂ ಸರ್ವದುಃಖಭೃತ್
ಯನ್ಮಮಾಸ್ತಿ ಶುಭಂ ಕಿಂಚಿತ್
ತದ್ದೀನಾನುಪಗಚ್ಛತು
ಯತ್ಕೃತಂ ದುಷ್ಕೃತಂ ತೈಶ್ಚ
ತದಶೇಷಮುಪೈತು ಮಾಮ್
(ಸ್ಕಂದ. ರೇವಾ. 13/37-38)

ಭೂಮಿಯ ಮೇಲಿನ ದರಿದ್ರ, ವಿಕಲಾಂಗ, ರೋಗಿ ಜೀವಿ (ಪ್ರಾಣಿ)ಗಳನ್ನು ನೋಡಿ, ಹೃದಯ ಕರಗದವರು ಮನುಷ್ಯರೇ ಅಲ್ಲ. ಸಮರ್ಥನಿದ್ದಾಗ್ಯೂ ಪ್ರಾಣ ಸಂಕಟದಲ್ಲಿರುವ, ಭಯವಿಹ್ವಲ ಜೀವಿ (ಪ್ರಾಣ) ಗಳನ್ನು ರಕ್ಷಿಸದವನು ಪಾಪವನ್ನು ಅನುಭವಿಸುವನು. ಆದುದರಿಂದ ಒದ್ದಾಡುತ್ತಿರುವ ಮೀನುಗಳನ್ನು ದುಃಖವನ್ನು ದೂರ ಮಾಡುವ ಬಗ್ಗೆ ಚಿಂತಿಸುವೆ. ಇದನ್ನು ಮಾಡದೆ ಮುಕ್ತಿಯನ್ನು ಇಚ್ಛಿಸುವುದಿಲ್ಲ. ನನಗೆ ಸ್ವರ್ಗವೂ ಬೇಡ. ನಾನು ಮನಸ್ಸು, ಮಾತು, ಶರೀರ ಹಾಗೂ ಕ್ರಿಯೆಗಳ ಮುಖಾಂತರ ಏನಾದರೂ ಪುಣ್ಯಕಾರ್ಯ ಮಾಡಿದ್ದರೆ, ಅದರಿಂದ ಈ ಎಲ್ಲ ದುಃಖಾರ್ತ ಪ್ರಾಣಿಗಳು ಒಳ್ಳೆಯ ಗತಿಯನ್ನು ಪಡೆಯಲಿ ಪರಮಾತ್ಮ.

ನರಕಂ ಯದಿ ಪಶ್ಯಾಮಿ
ವತ್ಸ್ಯಾಮಿ ಸ್ವರ್ಗಂ ಏವಂ ವಾ
ಯನ್ಮಯಾ ಸುಕೃತಂ
ಕಿಂಚಿನ್ಮನೋವಾಕ್ಕಾಯ ಕರ್ಮಭಿಃ
ಕೃತಂ ತೇನಾಪಿ ದುಃಖಾರ್ತಾಃ
ಸರ್ವೇಯಂತು ಶುಭಾಂಗತಿಮ್
(ಸ್ಕಂದ ರೇವಾ 13/77-78)

ಎಂದು ಹೃದಯ ಪೂರ್ವಕವಾಗಿ ಪರಮಾತ್ಮನನ್ನು ಪ್ರಾರ್ಥಿಸಿದನು.

ಎಷ್ಟೊಂದು ಮಾರ್ಮಿಕವಾದ ಹೃದಯದ ಪರಿಭಾಷೆ ಇದು. ಕರುಣಾಪೂರಿತ ಈ ಭಾವನೆಗಳು ಸದ್ಭಾವಯುತವಾಗಿದ್ದು, ಇಂದಿಗೂ, ಎಂದೆಂದಿಗೂ ಹೇಗೆ ಅನ್ವಯವಾಗುತ್ತದೆ! - ಎಂಬುದನ್ನು ಗಮನಿಸಬೇಕು.

ಇಂತಹ ಮಹಾನ್ ಧರ್ಮದ ಮಾತುಗಳನ್ನಾಡಿರುವ ಆಪಸ್ತಂಬನು ದಯೆ,

ಕರುಣೆಗಳ ಪ್ರತೀಕವಾಗಿದ್ದಾನೆ. ಈತನ ಭಾವನೆಗಳಲ್ಲಿ ಸ್ವಲ್ಪಾಂಶವನ್ನಾದರೂ ಜನರು ಅನುಸರಿಸಿದ್ದೇ ಆದರೆ ಪ್ರಪಂಚಾದ್ಯಂತ ಸುಖ - ಶಾಂತಿಗಳು ಹರಡುವುದರಲ್ಲಿ ಅನುಮಾನವಿಲ್ಲ.

ಈ ಮಾತುಗಳನ್ನಾಲಿಸಿ ಎಲ್ಲ ಮೀನ್ಗಾರರೂ ಗಡಿಬಿಡಿಗೊಂಡು, ರಾಜಾ ನಾಭಾಗನ ಬಳಿಗೆ ಹೋಗಿ ವಿಷಯವನ್ನೆಲ್ಲ ತಿಳಿಸಿದರು. ಕೂಡಲೇ ಮಂತ್ರಿ ಸಮೇತ ರಾಜನು ಬಂದು ಮುನಿಯ ದರ್ಶನ ಮಾಡಿ, ಅದರ ಸತ್ಕಾರಗಳನ್ನು ನೆರವೇರಿಸಿದನು.

''ರಾಜಾ! ಮೀನುಗಳೊಂದಿಗೆ ನನ್ನನ್ನೂ ಇವರು ಹೊರಗೆಳೆದಿದ್ದಾರೆ. ಅದರಿಂದ ನನ್ನ ಬೆಲೆಯನ್ನು ಅವರಿಗೆ ನೀಡು!''

ಧನವನ್ನು, ಅರ್ಧರಾಜ್ಯವನ್ನೂ ಕೂಡ ರಾಜನು ನೀಡಲು ಸಿದ್ಧನಾಗುತ್ತಾನೆ. ಅದಕ್ಕೆ 'ಅಷ್ಟೂನು ನನ್ನ ಬೆಲೆ ಅಲ್ಲ!' ಎಂದು ಋಷಿಯು ಹೇಳಿದನು. ಆಲಿಸಿ ರಾಜನು ಗಾಬರಿಗೊಂಡನು.

ಆಗ ಮಹರ್ಷಿ ಲೋಮಶನು ರಾಜನೊಂದಿಗೆ ಹೇಳಿದನು, ''ಹೇ ರಾಜನ್! ಭಯಗೊಳ್ಳದಿರು! ಗೋವು ಅಮೂಲ್ಯವಾದುದು. ಆದುದರಿಂದ ಈ ಋಷಿಯ ಮೂಲ ಬೆಲೆಯನ್ನು ಒಂದು ಗೋವಿನ ರೂಪದಲ್ಲಿ ನೀಡು.''

ರಾಜನು ಅಂತೆಯೇ ಮಾಡಿದನು. ಹಸುವನ್ನು ಪಡೆದು ಮೀನ್ಗಾರರು ಹೊರಟು ಹೋದರು. ಇದರಿಂದ ಮಹರ್ಷಿ ಆಪಸ್ತಂಬನು ಪ್ರಸನ್ನಗೊಂಡು,

''ರಾಜಾ! ಉಚಿತ ಮೌಲ್ಯವನ್ನು ನೀಡಿ ನನ್ನನ್ನು ಕೊಂಡಿರುವೆ. ಗೋವು ಪರಮಪವಿತ್ರವೂ, ಪಾಪಗಳನ್ನು ನಾಶ ಮಾಡುವಂತಹುದೂ ಆಗಿದೆ. ಅದು ಪ್ರದಕ್ಷಿಣೆ ಮಾಡಲು ಯೋಗ್ಯವಾದ ಮಂಗಳಕರವಾದ ಪ್ರಾಣಿಯಾಗಿದೆ - ಗಾವಃ ಪ್ರದಕ್ಷಿಣೀಕಾರ್ಯಾ ವಂದನೀಯಾ ಹಿ ನಿತ್ಯಶಃ' - ಎಂಬುದು ಇದಕ್ಕೆ ಸಾಕ್ಷಿ.

ಗಾವೋ ಮೇ ಜಾಗ್ರತೋ ನಿತ್ಯಂ
ಗಾವಃ ಪೃಷ್ಠತ ಏವ ಚ
ಗಾವೋ ಮೇ ಹೃದಯೇ ಚೈವ
ಗವಾಂ ಮಧ್ಯೇ ವಸಾಮ್ಯಹಮ್

ಎನ್ನುವ ಮಂತ್ರವನ್ನು ಶ್ರದ್ಧಾಪೂರ್ವಕವಾಗಿ ಜಪಿಸಿದಲ್ಲಿ, ಅಂತಹವನು ಸರ್ವ ಪಾಪಗಳಿಂದ ಮುಕ್ತನಾಗುವನು.

''ಬ್ರಾಹ್ಮಣರನ್ನು ರಕ್ಷಿಸುವುದು, ಗೋವುಗಳ ಪಾಲನೆ, ದೀನದುರ್ಬಲ ದುಃಖೀ ಪ್ರಾಣಿ (ಜೀವಿ) ಗಳನ್ನು ಪಾಲಿಸುವುದರಿಂದ ವ್ಯಕ್ತಿಯು ದಿವ್ಯಲೋಕವನ್ನು ಪಡೆಯುವನು.'' ಎಂದು ಹೇಳಿದನು.

ಮಹರ್ಷಿಯು ಅನುಗ್ರಹದಿಂದ ಮೀನುಗಳು ಸದ್ಗತಿಯನ್ನು ಪಡೆದುವು. ಆನಂತರ ಮಹರ್ಷಿಯು ರಾಜಾ ನಾಭಾಗನಿಗೆ ಸ್ವಧರ್ಮದ ಮಹಿಮೆಯೊಂದಿಗೆ ರಾಜನ ಧರ್ಮದ ಬಗ್ಗೆ ಹಾಗೂ ಅವನ ಕರ್ತವ್ಯಗಳ ಬಗ್ಗೆ ವಿಸ್ತೃತವಾದ ಉಪದೇಶಗಳನ್ನು ನೀಡಿದನು.

ಸದಾಚಾರ ಸಂಪನ್ನ ಧರ್ಮಾಚರಣೆಯ ಜೀವನ ಪದ್ಧತಿಯ ಪರಿಪಾಲನೆಗಾಗಿ ಈತ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಮುಖ್ಯವಾದುವು - 1. ಆಪಸ್ತಂಬ ಶ್ರೌತಸೂತ್ರ, 2. ಆಪಸ್ತಂಬ ಧರ್ಮಸೂತ್ರ, 3. ಆಪಸ್ತಂಬ ಗೃಹ್ಯಸೂತ್ರ, 4. ಆಪಸ್ತಂಬ ಶುಲ್ಬಸೂತ್ರ, 5. ಆಪಸ್ತಂಬ ಯಜ್ಞಪರಿಭಾಷಾ ಸೂತ್ರ, 6. ಆಪಸ್ತಂಬ ಸೂತ್ರ - ಇತ್ಯಾದಿ. ಇವೆಲ್ಲ ಗ್ರಂಥಗಳು ಅತ್ಯಂತ ಮಹತ್ವವಾಗಿ, ಆಚಾರ ಸಂಪನ್ನ ಸುಸಂಸ್ಕೃತ ಜೀವನ ಪದ್ಧತಿಗೆ ಸಹಾಯಕವಾಗುವಂತಹವುಗಳಾಗಿವೆ.

### 1. ಆಪಸ್ತಂಬ ಧರ್ಮಸೂತ್ರ

ಬಹಳ ಪ್ರಾಚೀನ ಕಾಲದಿಂದಲೂ ಪ್ರಮಾಣ ರೂಪದಲ್ಲಿ ಈ ಗ್ರಂಥವನ್ನು ಮಾನ್ಯಮಾಡಲಾಗಿದೆ. ಇತರೇ ಸ್ಮೃತಿ ಕಾರರು ಹಾಗೂ ನಿಬಂಧಕಾರರು 'ಆಪಸ್ತಂಬ ವಚೋ ಯಥಾ' ಎಂದು ಈತನ ಧರ್ಮಸೂತ್ರಗಳ ಭಾಗಗಳನ್ನು ಉದಾಹರಿಸಿದ್ದಾರೆ. ಇದರೊಂದಿಗೆ ಜೈಮಿನಿ ಸೂತ್ರಗಳಲ್ಲಿ ಆಚಾರ್ಯ ಶಬರನು, ಆದಿ ಶಂಕರರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ, ಯಾಜ್ಞವಲ್ಕ್ಯ ಸ್ಮೃತಿಯ ವ್ಯಾಖ್ಯಾನಕಾರರಾದ ಆಚಾರ್ಯ ವಿಶ್ವರೂಪ, ಮನುಸ್ಮೃತಿಯ ಮೇಧಾತಿಥಿ, ಮಿತಾಕ್ಷರದಲ್ಲಿ ಈ ಸ್ಮೃತಿಯ ಉಲ್ಲೇಖಗಳಿವೆ.

ಆಪಸ್ತಂಬ ಧರ್ಮಸೂತ್ರವು ಧರ್ಮಶಾಸ್ತ್ರದ ಒಂದು ಮುಖ್ಯ ಅಂಗವಾಗಿದೆ. ಆಚಾರ - ವಿಚಾರ ಹಾಗೂ ಕರ್ತವ್ಯಾಕರ್ತವ್ಯವನ್ನು ನಿರ್ದೇಶಿಸುವ ಶಾಸ್ತ್ರದ ರೂಪದಲ್ಲಿ ಇದನ್ನು ಉಪಯೋಗಿಸಿಕೊಳ್ಳಲಾಗಿದೆ. ಈ ಗ್ರಂಥವನ್ನು ಸೂತ್ರಗಳ ರೂಪದಲ್ಲಿ ಬರೆಯಲಾಗಿದೆ. ಇದರಲ್ಲಿ ಎರಡು ಭಾಗಗಳಿವೆ. ಇವನ್ನು 'ಪ್ರಶ್ನೆ'ಗಳು ಎಂಬ ಹೆಸರಿನಿಂದ ಕರೆಯಲಾಗಿದೆ-

1. ಮೊದಲನೆ ಪ್ರಶ್ನದಲ್ಲಿ 11 ಪಟಲ (ಕಾಂಡ) ಗಳು ಹಾಗೂ 32 ಕಂಡಿಕೆ (ಅಧ್ಯಾಯ)ಗಳು ಇವೆ.

2. ಎರಡನೇ ಪ್ರಶ್ನದಲ್ಲಿ 11 ಪಟಲಗಳು ಹಾಗೂ 29 ಕಂಡಿಕೆಗಳು ಇವೆ.

ಇದರ ಪ್ರಥಮ ಪ್ರಶ್ನದ ಎಂಟನೆಯ ಪಟಲವು 'ಅಧ್ಯಾತ್ಮಜ್ಞಾನ ಪಟಲ' ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ಇದಕ್ಕೆ ಆಚಾರ್ಯ ಶಂಕರ ಭಗವತ್ಪಾದರು 'ವಿವರಣ' ಎನ್ನುವ ಹೆಸರಿನ ಭಾಷ್ಯವನ್ನು ರಚಿಸಿರುವರು. ಈ ಧರ್ಮಸೂತ್ರದ ಬಗ್ಗೆ ಆಚಾರ್ಯ ಹರದತ್ತನು ಬರೆದಿರುವ 'ಉಜ್ವಲಾವೃತ್ತಿ' ಎನ್ನುವ ಹೆಸರಿನ ಸಂಸ್ಕೃತ ವ್ಯಾಖ್ಯಾನವು ಅತ್ಯಂತ ಪ್ರಸಿದ್ಧವಾದುದಾಗಿದೆ.

ಆಪಸ್ತಂಬನು ತನ್ನ ಈ ಗ್ರಂಥವನ್ನು 'ಸಮಯಾಚಾರಮಯ ಧರ್ಮಶಾಸ್ತ್ರ' ಎಂದು ತಿಳಿಸಿದ್ದಾನೆ. ಇದೇ ಮಾತನ್ನು ಗ್ರಂಥದ ಪ್ರಾರಂಭದಲ್ಲಿ ತಿಳಿಸಿದ್ದಾನೆ. 'ಅಥಾತಃ ಸಮಯಾಚಾರಿಕಾನ್ ಧರ್ಮಾನ್ ವ್ಯಾಖ್ಯಾಸ್ಯಾಮಃ ।।1।। ಧರ್ಮಸಮಯಃ ಪ್ರಮಾಣಮ್ ।।2।।

ಆಪಸ್ತಂಬನು ವೇದಗಳೊಂದಿಗೆ ಸತ್ಪುರುಷರ ಆಚಾರ-ವಿಚಾರಗಳು, ಅವರ ಉಪದೇಶಗಳನ್ನು ಪರಮ ಪ್ರಮಾಣವನ್ನಾಗಿ ತಿಳಿದಿದ್ದಾನೆ. ಸಾಮಾನ್ಯ ವ್ಯಕ್ತಿಯು ವೇದಶಾಸ್ತ್ರಜ್ಞನೂ, ಜ್ಞಾನಿಯೂ ಆದ ಆಚಾರ್ಯನನ್ನು ಪರಮ





ತಿರುಪತಿಯಲ್ಲಿ

# ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ












## ತಿರುಮಲೆಯಲ್ಲಿ ದ್ವಿತೀಯ ಕ್ಯೂ ಕಾಂಪ್ಲೆಕ್ಸ್ ಉದ್ಘಾಟನೆ
## ಸುಪ್ರಭಾತಂ ಸಿ.ಡಿ. ಬಿಡುಗಡೆ
## ತೆಲುಗು ಪುಸ್ತಕಾವಿಷ್ಕರಣ

- ಆಂಧ್ರಪ್ರದೇಶ್ ಮುಖ್ಯಮಂತ್ರಿಯವರಿಂದ

ಪೂಜ್ಯನೆಂದು ತಿಳಿಯಬೇಕು - ಎಂದು ತಿಳಿಸಿದ್ದಾನೆ. ಇಂತಹ ವಿನಯಸಂಪನ್ನ, ಆತ್ಮಜ್ಞಾನಿ, ಜಿತೇಂದ್ರಿಯನ ಜೀವನ ನಿರ್ವಾಹದ ಸಾಧನಗಳನ್ನು ಕೂಡ ಪ್ರಮಾಣಸ್ವರೂಪವನ್ನಾಗಿ ತಿಳಿದು, ಆಚರಿಸಲು ಯೋಗ್ಯವಾದವುಗಳೆಂದು ಆಪಸ್ತಂಬನು ತಿಳಿಸಿ, ಧರ್ಮಾಧರ್ಮ ನಿರ್ಣಯದಲ್ಲಿ ಇವು ಸಹಾಯಕವಾಗುತ್ತವೆ - ಎಂದು ಸೂಚಿಸಿದ್ದಾನೆ.

ಇಂತಹ ವ್ಯಕ್ತಿಯನ್ನು ಆರ್ಯ ಎಂದೂ ಕರೆಯಲಾಗುತ್ತದೆ. ಇಂತಹವರ ಆಚರಣೆಗಳನ್ನು ಅನುಸರಿಸಲು ಯೋಗ್ಯವಾಗಿದ್ದು, ಸರ್ವ ಜನಾದರಣೀಯವಾಗಿದ್ದು, ಪ್ರಶಂಸಾರ್ಹ ವಾಗಿರುತ್ತವೆ. ಇಂತಹವನ್ನು ಪರಾಮರ್ಶಿಸಲೂ ಬಹುದು ಎಂದು ಆಪಸ್ತಂಬನು ತಿಳಿಸುತ್ತಾನೆ. ಇದೇ ಇಂತಹ ಆಚಾರವನ್ನು ನಿಂದಿಸುವವರು, ಸ್ವತಃ ಆಚರಿಸದೆ ಇರುವವರು ಅಧರ್ಮೀಯರಾಗುತ್ತಾರೆ -

ಯಂ ತ್ವಾರ್ಯಾಃ
ಕ್ರಿಯಮಾಣಂ ಪ್ರಶಂಸಂತಿ
ಸ ಧರ್ಮೋ ಯಂ ಗರ್ಹಂತೇ
ಸೋಽಧರ್ಮಃ ॥7/7॥

ಆಚಾರ್ಯ ಶಬ್ದದ ವ್ಯಾಖ್ಯಾನವನ್ನು ಈತ ವಿವರವಾಗಿ ನೀಡಿದ್ದಾನೆ. ಧರ್ಮದ ಬಗ್ಗೆ ಶಿಕ್ಷಣ ನೀಡುವವನು ಆಚಾರ್ಯನಾಗುತ್ತಾನೆ. ಇಂತಹ ಆಚಾರ್ಯನಿಗೆ ವ್ಯತಿರೇಕವಾಗಿ ಯಾವುದೇ ರೀತಿಯ ದ್ರೋಹವನ್ನು ಮಾಡಬಾರದು 'ತಸ್ಮೈ ನ ದ್ರುಹ್ಯೇತ್ ಕದಾಚನ' (1/15). ಪಶು ಸಮಾನ ಅಜ್ಞಾನೀ ಮಾನವನಿಗೆ ವಿದ್ಯೆ ಹಾಗೂ ಜ್ಞಾನಗಳನ್ನು ನೀಡುವುದರಿಂದ ಆತನು ದೇವತೆಗಳಿಂದಲೂ ಮೇಲ್ಪಟ್ಟದ ಮಹಾತ್ಮ ನಾಗುವನು. ಮಾತಾ - ಪಿತೃಗಳು ಕೇವಲ ದೇಹದ ಜನ್ಮದಾತರು. ಆದರೆ ಆಚಾರ್ಯನು ಜ್ಞಾನವಿಗ್ರಹವನ್ನು ಆ ವ್ಯಕ್ತಿಗೆ ಪ್ರದಾನ ಮಾಡುವವನಾಗಿರುತ್ತಾನೆ. ಹೀಗೆ ಮಾಡುವುದರಿಂದ ಆ ವ್ಯಕ್ತಿಯು ಮರು ಜನ್ಮ ಪಡೆದು ದ್ವಿಜನಾಗುತ್ತಾನೆ. - 'ಸ ಹಿ ವಿದ್ಯಾತಸ್ತಂ ಜನಯತಿ॥ ತಚ್ಛ್ರೇಷ್ಠ ಜನ್ಮ ॥ ಶರೀರಮೇವ ಮಾತಾಪಿತರೌ ಜನಯತಃ॥' (1/16-18).

ತಪಸ್ಸು ಹಾಗೂ ಸ್ವಾಧ್ಯಾಯವನ್ನು ಆಪಸ್ತಂಬನು ಪರಮ ಧರ್ಮವೆಂದು ನಂಬುತ್ತಾನೆ. ಇವು ಬ್ರಾಹ್ಮಣನ ಮುಖ್ಯ ಧರ್ಮವೂ ಹೌದು. 'ತಪಃ ಸ್ವಾಧ್ಯಾಯ ಇತಿ ಬ್ರಾಹ್ಮಣಮ್ ।' (4/1). ಸಾಧಾರಣವಾಗಿರುವ ಸ್ವಾಧ್ಯಾಯವು ಕೃಚ್ಛ್ರ - ಚಾಂದ್ರಾಯಣಾದಿ ತಪಸ್ಸಿಗೆ ಸಮಾನವಾದ ಫಲವನ್ನು ನೀಡುತ್ತದೆ.

ಯಾವುದಾದರೊಂದು ಕಾರ್ಯವನ್ನು ಮಾಡಿ ಸಾಫಲ ಹೊಂದಿ, ಸಿದ್ಧಿ ಪಡೆದಲ್ಲಿ ಆ ವ್ಯಕ್ತಿಯು ಹರ್ಷಾತಿರೇಕವನ್ನು ಪಡೆಯಬಹುದು.



ಇದು ತುಂಬಾ ಅಪಾಯಕರವಾದುದು. ಕಾರಣ, ಇದು ಅಧಿಕವಾದಲ್ಲಿ ದರ್ಪ ಅಥವಾ ಅಹಂಕಾರಗಳು ಅವನಲ್ಲಿ ಉದ್ಭವವಾಗುತ್ತವೆ. ಇದರಿಂದ ಪೂಜ್ಯ - ಅಪೂಜ್ಯ ಹಾಗೂ ಕಾರ್ಯ - ಅಕಾರ್ಯಗಳ ಸರಿಯಾದ ತೀರ್ಮಾನ ತೆಗೆದುಕೊಳ್ಳಲಾಗುವುದಿಲ್ಲ. ಇದರಿಂದ ಅವನಿಗೆ ಅಪಾಯವೂ ಉಂಟಾಗಬಹುದು. ಇಂತಹ ಪ್ರಮತ್ತ ವ್ಯಕ್ತಿಯಿಂದ ಧರ್ಮದ ಅತಿಕ್ರಮಣವಾಗುವುದು. ಇದು ಅವನ ನೈತಿಕ ಪತನವನ್ನು ಉಂಟು ಮಾಡುವುದೇ ಅಲ್ಲದೆ ಪರಲೋಕದಲ್ಲಿ ನರಕ ಪ್ರಾಪ್ತಿಯೂ ಆಗುತ್ತದೆ. ಆದುದರಿಂದ ನಿತ್ಯಸಮತ್ವ ಹಾಗೂ ಜ್ಞಾನದ ಸ್ಥಿತಿಯಲ್ಲಿ ಇರಬೇಕಾಗುತ್ತದೆ. ಇದಕ್ಕೆ ಸಂಬಂಧಪಟ್ಟ ಹಾಗೆ ಆಪಸ್ತಂಬನ ಮೂಲ ಸೂತ್ರ ಹೀಗಿದೆ-

ದೃಷ್ಟ್ವಾ ದರ್ಪತಿ ದೃಪ್ತೋ ಧರ್ಮ
ಮತಿಕ್ರಮತಿ ಧರ್ಮಾತಿಕ್ರಮೇ
ಖಲು ಪುನರ್ನರಕಃ ॥ 4/4

ಈ ಮಾತನ್ನು ಭಗವದ್ಗೀತೆಯ ಬಹಳಷ್ಟು ವ್ಯಾಖ್ಯಾನಕಾರರು ಹಾಗೂ ಆಚಾರ್ಯರು ತಮ್ಮ ತಮ್ಮ ಗೀತಾವ್ಯಾಖ್ಯಾನಗಳಲ್ಲಿ ಅಲ್ಲಲ್ಲಿ ಉದಾಹರಿಸಿರುವರು.

ಧರ್ಮಾಚರಣೆಯ ಮಹಿಮೆಯನ್ನು ಬಹಳ ಮಹತ್ವದ್ದೆಂದು ಕರೆಯುತ್ತಾ ಆಪಸ್ತಂಬನು ಹೀಗೆಂದು ಹೇಳುತ್ತಾನೆ -

ಶುದ್ಧ ಧರ್ಮಾಚರಣೆಯಿಂದ ಅರ್ಥ, ಕಾಮ, ಯಶ ಇತ್ಯಾದಿಗಳು ಸ್ವತಃ ಪ್ರಾಪ್ತವಾಗುತ್ತವೆ. ಇದರಿಂದ ಎಲ್ಲರಿಗೂ ಪೂರ್ಣ ಸುಖವು ಲಭಿಸುವುದು. ಮಾವಿನ ಹಣ್ಣನ್ನು ಪಡೆಯಲು ಮಾವಿನ ಸಸಿಯನ್ನು ನೆಡಲಾಗುವುದು. ಆದರೆ ಮಾವಿನ ಹಣ್ಣಿನೊಂದಿಗೆ ಸಾಕಷ್ಟು ನೆರಳು, ಸೌದೆ, ಎಲೆ, ಸುಗಂಧ ಇತ್ಯಾದಿಗಳೂ ದೊರೆಯುತ್ತವೆ.

ಇದೇ ರೀತಿಯಲ್ಲಿ ಧರ್ಮದ ಅನುಷ್ಠಾನದಿಂದ ಅರ್ಥ ಇತ್ಯಾದಿಗಳು ಸ್ವತಃ ಲಭಿಸುತ್ತವೆ. ಒಮ್ಮೊಮ್ಮೆ ಇವು ಲಭಿಸದಿದ್ದರೂ ಧರ್ಮವೇ ಅಪಾರ ಸಂತುಷ್ಟಿಯನ್ನು ನೀಡುತ್ತದೆ. ಯಾರಿಗೂ, ಯಾವುದೇ ರೀತಿಯಾದ ಹಾನಿಯೂ ಉಂಟಾಗುವುದಿಲ್ಲ. ಆದುದರಿಂದ ಸದ್ಧರ್ಮವನ್ನು ಎಂದೆಂದಿಗೂ ದೂರ ಮಾಡಬಾರದು.

ಇದಕ್ಕೆ ಸಂಬಂಧಪಟ್ಟ ಮೂಲ ಶ್ಲೋಕ ಈ ರೀತಿ ಇದೆ-

ತದ್ಯಥಾಽಮ್ರಫಲಾರ್ಥೇ ನಿಮಿತ್ತೇ
ಛಾಯಾಗಂಧ ಇತ್ಯನೂತ್ಪದ್ಯೇತ್ ।
ಏವಂ ಧರ್ಮಂ ಚರ್ಯಮಾಣಂ
ಅರ್ಥಾಂ ಅನೂತ್ಪದ್ಯಂತೇ ॥ 7/3

ಆಪಸ್ತಂಬ ಸೂತ್ರದ 'ಅಧ್ಯಾತ್ಮ ಪಟಲ'ವೆಂದು ಕರೆಯಲ್ಪಡುವ 8 ನೇ ಪಟಲದಲ್ಲಿ

ಒಟ್ಟು 14 ಸೂತ್ರಗಳಿವೆ. ಇದರಲ್ಲಿ 1. ಆತ್ಮಜ್ಞಾನ, 2. ಯೋಗಜ್ಞಾನ, 3. ಪರಮಾತ್ಮಜ್ಞಾನದ ಸಂಬಂಧಗಳಿಗೆ ಅನ್ವಯವಾಗುವಂತೆ ಅನೇಕ ಮಹತ್ವಪೂರ್ಣ ಮಾತುಗಳನ್ನು ಹೇಳಲಾಗಿದೆ.

ಅಧ್ಯಾತ್ಮಜ್ಞಾನವು ಎಲ್ಲದಕ್ಕಿಂತಲೂ ಹಿರಿದಾದುದು. ಕಾರಣ ಇದು ಮೋಕ್ಷ ಪಡೆಯುವಿಕೆಯಲ್ಲಿ ಹೆಚ್ಚು ಸಹಾಯ ಮಾಡುತ್ತದೆ. ಆತ್ಮಲಾಭ ಅಥವಾ ಪರಮಾತ್ಮಪ್ರಾಪ್ತಿಯು ಪ್ರಪಂಚದ ಅತ್ಯಧಿಕ ಸಹಾಯ ನೀಡುವ ಅಂಶವಾಗಿದೆ - 'ಆತ್ಮಲಾಭಾನ್ನಪರಂ ವಿದ್ಯತೇ।' (8/2).

ಎಲ್ಲ ಜೀವಿಗಳಲ್ಲೂ ತನ್ನ ಆತ್ಮವನ್ನು ಕಾಣುವ ವಿದ್ವಾಂಸರು ಮೋಹದಲ್ಲಿ ಎಂದಿಗೂ ಬೀಳುವುದಿಲ್ಲ, ರಾಗ - ದ್ವೇಷಗಳಲ್ಲಿ ಮುಳುಗುವುದಿಲ್ಲ. ಸ್ವತಃ ಅವರುಗಳು ಬ್ರಹ್ಮನೇ ಆಗುವರು. ಅಂತಹವರು ಸ್ವರ್ಗ ಲೋಕಕ್ಕಿಂತಲೂ ಮೇಲಿನ ಲೋಕದಲ್ಲಿ ಪ್ರತಿಷ್ಠಿತರಾಗುವರು. ಅಂತಹವರು ತಮ್ಮದೇ ಮಹಿಮೆಯಲ್ಲಿ ವಿರಾಜಮಾನರಾಗಿ ಸ್ವಯಂ ಪ್ರಕಾಶಿತಗೊಳ್ಳುವರು -

'ಆತ್ಮನ್ ಪಶ್ಯನ್ ಸರ್ವಭೂತಾನಿ
ನ ಮುಹ್ಯೇಚ್ಚಿಂತಯನ್ ಕವಿಃ।
ಆತ್ಮಾನಂ ಚೈವ ಸರ್ವತ್ರಯಃ
ಪಶ್ಯತ್ಸ ವೈ ಬ್ರಹ್ಮಾನಾಕಪೃಷ್ಠೇ ವಿರಾಜತಿ।'
(8-9)

ಇದೇ ವಿಷಯವನ್ನು ಉಪನಿಷದಾದಿ ಶಾಸ್ತ್ರಗಳು ಹಾಗೂ ಗೀತೆ ಇತ್ಯಾದಿಗಳಲ್ಲಿ ಈಶಾವಾಸ್ಯ ಉಪನಿಷತ್ತಿನಲ್ಲಿ ಇದನ್ನು ಈ ರೀತಿ ವರ್ಣಿಸಲಾಗಿದೆ-

ಯಸ್ತುಸರ್ವಾಣಿ ಭೂತಾನ್ಯಾತ್ಮ
ನ್ಯೇವಾನುಪಶ್ಯತಿ।
ಸರ್ವಭೂತೇಷು ಚಾತ್ಮಾನಂ
ತತೋ ನ ವಿಜುಗುಪ್ಸ್ಯತೇ ॥6॥
ತತ್ರ ಕೋ ಮೋಹಃ ಕಃ ಶೋಕಃ
ಏಕತ್ವಮನುಪಶ್ಯತಃ ॥7॥
ಸರ್ವಭೂತಸ್ಥಮಾತ್ಮಾನಂ
ಸರ್ವಭೂತಾನಿ ಚಾತ್ಮನಿ।
ಈಕ್ಷ್ಯತೇ ಯೋಗಯುಕ್ತಾತ್ಮಾ
ಸರ್ವತ್ರ ಸಮದರ್ಶನಃ॥

(ಗೀತೆ 6/29, 20, 30 - 32 ಇತ್ಯಾದಿ ಶ್ಲೋಕಗಳು ಇದಕ್ಕೆ ಉದಾಹರಣೆಯಾಗಿವೆ.)

'ಅಧ್ಯಾತ್ಮಪಟಲ'ದ ಕೊನೆಯಲ್ಲಿ 'ಅನಾತ್ಮ್ಯ ಯೋಗ'ದ ವರ್ಣನೆ ಇದೆ. ಬೇರೆ ಶಾಸ್ತ್ರಗಳಲ್ಲಿ ಅಧರ್ಮಾಚರಣೆ ಹಾಗೂ ಪಾಪ (ನಿಂದಿತ ಕರ್ಮ) ಎಂದು ಕರೆಯುವುದನ್ನು ಇಲ್ಲಿ 'ಅನಾತ್ಮ್ಯ ಯೋಗ' ಅಥವಾ 'ಭೂತದಾಹೀಯ ದೋಷ' ಎಂದು ಕರೆದು, ಅದನ್ನು ಪರಿತ್ಯಜಿಸಬೇಕೆಂದು ಇಲ್ಲಿ ತಿಳಿಸಲಾಗಿದೆ. ಇದು ಭಗವತ್ಪ್ರಾಪ್ತಿಯಲ್ಲಿ ಪ್ರಬಲವಾದ ಅಡ್ಡಿ ಎಂದು ತಿಳಿಸಲಾಗಿದೆ. ಅಡ್ಡಿ ಈ ರೀತಿಯಲ್ಲಾಗುತ್ತದೆ. ಕ್ರೋಧ, ಈರ್ಷ್ಯಾತಿರೇಕ, ರೋಷ, ಲೋಭ, ಮೋಹ, ಡಂಭ, ದ್ರೋಹ, ಮಿಥ್ಯಾಭಾಷಣ, ಬಹಳ ಸಲ ಊಟ ಮಾಡುವುದು, ಅತಿಯಾದ ಭೋಜನ, ಪರದೋಷ ದರ್ಶನ (ಪರರ ನಿಂದೆ), ಉತ್ತಮ ಗುಣಗಳನ್ನು ದ್ವೇಷಿಸುವುದು, ಸ್ತ್ರೀಯರನ್ನು ಆಕರ್ಷಿಸುವುದು, ಗೂಢವಾಗಿ ದ್ವೇಷಿಸುವುದು, ಅಜಿತೇಂದ್ರಿಯತ್ವ - ಇವುಗಳು ಭಗವತ್ಪ್ರಾಪ್ತಿಗೆ ಮುಖ್ಯವಾದ ಅಡ್ಡಿಗಳು.

ಇದಕ್ಕೆ ವಿರುದ್ಧವಾದ ಅಕ್ರೋಧ, ಅಹರ್ಷ, ಅರೋಷ, ಅಲೋಭ, ಅಮೋಹ, ಅದಂಭ, ಅದ್ರೋಹ, ಸತ್ಯವಚನ, ಅನಸೂಯ, ಆರ್ಜವ, ಮಾರ್ದವ, ಶಮದಮ, ಸರ್ವ ಭೂತಹಿತೈಷಿತಾ - ಇತ್ಯಾದಿಗಳೆಲ್ಲ ಎಲ್ಲರಿಂದ ಆಚರಿಸಲ್ಪಡಲು ಯೋಗ್ಯವಾದವುಗಳು. ಭಗವತ್ಪ್ರಾಪ್ತಿಯಲ್ಲಿ ಇವು ತುಂಬಾ ಸಹಾಯಕ. ಎಲ್ಲ ವರ್ಣದವರೂ, ಎಲ್ಲ ಆಶ್ರಮಗಳವರೂ ಅನುಸರಿಸಬೇಕಾದ ಧಾರ್ಮಿಕ ನಿಯಮ ಹಾಗೂ ಧಾರ್ಮಿಕ ಕರ್ತವ್ಯಗಳಾಗಿವೆ.

ಇವುಗಳನ್ನು ಅನುಸರಿಸಿ, ಆಚರಿಸುವುದರಿಂದ ವ್ಯಕ್ತಿಯು ಸರ್ವಜ್ಞ, ಸರ್ವಗಾಮಿ ಆಗುವನು. ಪರಿಣಾಮವಾಗಿ ಅವನು ಜೀವನ್ಮುಕ್ತನಾಗುವನು - ಸರ್ವಾಶ್ರಮಾಣಾಂ ಸಮಯಪದಾನಿ ತಾನ್ಯನುತಿಷ್ಠನ್ ವಿಧಿನಾ ಸಾರ್ವಗಾಮೀ ಭವತಿ॥ (8/14) ನಿರ್ಹತ್ಯ ಭೂತದಾಹೀಯಾನ್ ಕ್ಷೇಮಂ ಗಚ್ಛತಿ ಪಂಡಿತಃ (8/11).

9 ನೇ ಪಟಲ ಹಾಗೂ 10 ನೇ ಪಟಲಗಳಲ್ಲಿ ಬ್ರಹ್ಮಹತ್ಯೆ ಇತ್ಯಾದಿ ಪಾತಕ - ಮಹಾಪಾತಕಗಳ ಪ್ರಾಯಶ್ಚಿತ್ತಗಳ ವರ್ಣನೆ ಇದೆ. 11 ನೇ ಪಟಲದಲ್ಲಿ ಸ್ನಾತಕ - ವ್ರತ, ಸ್ನಾತಕ - ಧರ್ಮಗಳ ವಿವರಣೆ ಇದೆ.

ದ್ವಿತೀಯ ಪ್ರಶ್ನದ -1ನೇ ಪಟಲದಿಂದ 4 ನೇ ಪಟಲದವರೆವಿಗಿನ ಸೂತ್ರಗಳಲ್ಲಿ ಗೃಹಸ್ಥಧರ್ಮ, ವೈಶ್ವದೇವ ಕರ್ಮ, ಅತಿಥಿ ಸತ್ಕಾರ ಇತ್ಯಾದಿಗಳನ್ನು ಸಾಂಗೋಪಾಂಗವಾಗಿ ವಿವರಿಸಲಾಗಿದೆ. ಇಲ್ಲಿಂದ ಮುಂದೆ ಬ್ರಾಹ್ಮಣಾದಿಗಳ ವೃತ್ತಿ, ವಿವಾಹ, ಸ್ತ್ರೀ ರಕ್ಷೆ, ಆಸ್ತಿ ವಿಭಾಗ, ಶ್ರಾದ್ಧ ಕಲ್ಪ, ನಾಲ್ಕು ಆಶ್ರಮಗಳ ಧರ್ಮ, ಗೃಹಸ್ಥಾಶ್ರಮ ಧರ್ಮದ ಶ್ರೇಷ್ಠತೆ ಹಾಗೂ ಕೊನೆಯಲ್ಲಿ ರಾಜಧರ್ಮವನ್ನು ವಿಸ್ತಾರವಾಗಿ ವರ್ಣಿಸಲಾಗಿದೆ.

ಈ ರೀತಿಯಲ್ಲಿ ಆಪಸ್ತಂಬ ಪ್ರಣೀತ ಧರ್ಮಸೂತ್ರಗಳಲ್ಲಿ ಧರ್ಮಶಾಸ್ತ್ರದ ಅತ್ಯಂತ ಪ್ರೌಢ ಹಾಗೂ ಕರ್ತವ್ಯಾಕರ್ತವ್ಯಗಳ ವಿವರಗಳನ್ನು ತಿಳಿಸಲಾಗಿದೆ.

### 2. ಆಪಸ್ತಂಬಸ್ಮೃತಿ

ಇದೊಂದು ಸಂಕ್ಷಿಪ್ತ ಸ್ಮೃತಿ. ಇದರಲ್ಲಿ 10 ಅಧ್ಯಾಯಗಳಿದ್ದು, 2000 ಶ್ಲೋಕಗಳಿವೆ. ಇದರಲ್ಲಿ ಮುಖ್ಯವಾಗಿ ವಿವಿಧ ರೀತಿಯ ಪ್ರಾಯಶ್ಚಿತ್ತ ವಿಧಾನಗಳನ್ನು ವಿವರಿಸಲಾಗಿದೆ. ಕೊನೆಯ 10 ನೇ ಅಧ್ಯಾಯದಲ್ಲಿ ಅಧ್ಯಾತ್ಮಜ್ಞಾನ ಹಾಗೂ ಮೋಕ್ಷಪ್ರಾಪ್ತಿಯ ಸಾಧನಗಳನ್ನು ವಿವರಿಸಲಾಗಿದೆ. ಇದು ಬಹಳ ಮಹತ್ವಪೂರ್ಣ ವರ್ಣನೆಯಾಗಿದೆ.

ಆಪಸ್ತಂಬನು ತನ್ನ ಸ್ಮೃತಿಯ ಪ್ರಾರಂಭದಲ್ಲಿ ಸಂಸಾರಿಗಳಿಗೆ ಹಸುಗಳನ್ನು ಸಾಕುವುದು ಉತ್ತಮ ಕಾರ್ಯ - ಎಂದು ತಿಳಿಸಿದ್ದಾನೆ. ಗೋಹತ್ಯೆಯು ಮಹಾಪಾಪವೆಂದೂ ತಿಳಿಸಿದ್ದಾನೆ. ರೋಗ ಬಂದಾಗ, ಅಂತಹ ಗೋವುಗಳಿಗೆ ಚಿಕಿತ್ಸೆ ಮಾಡುವುದು, ಮಾಡಿಸುವುದು, ತನ್ಮೂಲಕ, ಅವುಗಳ ರಕ್ಷಣೆ, ಶುಶ್ರೂಷೆಗಳನ್ನು ಮಾಡುವುದು ಮಹಾನ್ ಪುಣ್ಯಕಾರ್ಯವೆಂದು ತಿಳಿಸಿದ್ದಾನೆ. ಗೋವುಗಳಿಗೆ ಚಿಕಿತ್ಸೆ ನಡೆಸುವಾಗ, ಚಿಕಿತ್ಸೆ ಮಾಡಿಸುವವನಿಗೆ ಸ್ವಲ್ಪ ಹಾನಿ ಆಗಬಹುದು.

ಆದರೂ ಚಿಕಿತ್ಸೆ ಮುಂದುವರಿಸಬೇಕು. ಅದು ಗೋವುಗಳ ಬಗೆಗೆ ಉತ್ತಮ ಆದರವನ್ನು ತೋರಿಸುವುದು. ಇದು ಪುಣ್ಯಕಾರ್ಯವೇ ಆಗಿರುತ್ತದೆ. ಅನಾರೋಗ್ಯದ ಕಾರಣ ಹಸುವಿಗೆ ಶಸ್ತ್ರಚಿಕಿತ್ಸೆ, ಆಯುಧದ ಪ್ರಯೋಗ ಮಾಡಿದ್ದೇ ಆದರೆ ಅದು ಪಾಪವಾಗುತ್ತದೆ ಎಂಬ ನಂಬಿಕೆ ಅನೇಕರಲ್ಲಿದೆ. ಹೀಗೆ ಔಷಧೋಪಚಾರಗಳು ಮಾಡುವಾಗ ಗೋವು ಮರಣಿಸಿದಲ್ಲಿ ಅದರ ಪಾಪವು (ಗೋಹತ್ಯಾದೋಷವು) ಪ್ರಾಪ್ತವಾಗುತ್ತದೆ ಎಂದು ನಂಬುವವರೂ ಕೆಲವರಿದ್ದಾರೆ. ಆದುದರಿಂದ ಕಾಯಿಲೆ ಬಿದ್ದ ಗೋವುಗಳನ್ನು ಪಶುವೈದ್ಯಶಾಲೆಗೆ ತೋರಿಸುವುದೇ ಇಲ್ಲ. ಇದು ತಪ್ಪು ಎನ್ನುತ್ತಾನೆ ಆಪಸ್ತಂಬ.

ಯಂತ್ರೇಣ ಗೋಚಿಕಿತ್ಸಾರ್ಥೇ
ಮೃತಗರ್ಭ ವಿಮೋಚನೇ ।
ಯತ್ರೇ ಕೃತೇ ವಿಪನ್ನಿಶ್ಚೇತ್
ಪ್ರಾಯಶ್ಚಿತ್ತೇನ ವಿದ್ಯತೇ ॥1॥

ಗೋ - ಚಿಕಿತ್ಸೆ ಮಾಡುವಾಗ ಅಥವಾ ಅದರ ಗರ್ಭದಿಂದ ಸತ್ತ ಕಂದನನ್ನು ಹೊರತೆಗೆಯುವಾಗ ಏನಾದರೂ ಅಪಾಯ ಸಂಭವಿಸಿದರೆ, ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದ ಅವಶ್ಯಕತೆಯಿಲ್ಲ.

ಇದೇ ರೀತಿಯಲ್ಲಿ ಪ್ರಾಣಿಗಳಿಗೆ ಅವುಗಳಿಗೆ ರಕ್ಷಣೆ ಕೊಡುವ ದೃಷ್ಟಿಯಿಂದ ಔಷಧಿ, ಲವಣ, ಎಣ್ಣೆ - ಇತ್ಯಾದಿ ಪದಾರ್ಥಗಳು ಹಾಗೂ ಪುಷ್ಟಿಕಾರಕ ಮೇವು ಇತ್ಯಾದಿಗಳನ್ನು ನೀಡಿದ್ದಾಗ್ಯೂ ಕೂಡ ಆ ಪ್ರಾಣಿಯ ಮೇಲೆ ಏನಾದರೂ ವಿಪತ್ತು ಉಂಟಾದಲ್ಲಿ ಅದರಿಂದ ಯಾವುದೇ ಪಾಪ ಉಂಟಾಗುವುದಿಲ್ಲ-

ಔಷಧಂ ಲವಣಂ ಚೈವ
ಸ್ನೇಹಂ ಪುಷ್ಟ್ಯರ್ಥ ಭೋಜನಮ್ ।
ಪ್ರಾಣಿನಾಂ ಪ್ರಾಣಾವೃತ್ತ್ಯರ್ಥಂ
ಪ್ರಾಯಶ್ಚಿತ್ತಂ ನ ವಿದ್ಯತೇ ॥1-11॥

ಅತಿಯಾಗಿ ಕೊಡದೆ ಮಿತವಾಗಿ, ಯಥೋಚಿತವಾಗಿ ಮೇವು, ಔಷಧದ ವಸ್ತುಗಳನ್ನು ನೀಡಿದ್ದೇ ಆದರೆ ಪಶುಸಂಗೋಪನೆ ಉತ್ತಮವಾಗುತ್ತದೆ. ಅಸಮರ್ಪಕವಾಗಿ, ಅತಿಯಾಗಿ ನೀಡಿದರೆ ಪ್ರಾಣಿಗಳಿಗೆ ಮೃತ್ಯು ಸಂಭವಿಸಬಹುದು. ಆಕಸ್ಮಾತ್ತಾಗಿ ಹಾಗಾದಾಗ 'ಕೃಛ್ರವ್ರತ'ವನ್ನು ಆಚರಿಸಬೇಕು.

ಅತಿರಿಕ್ತ ವಿಪನ್ನಾನಾಂ
ಕೃಛ್ರಮೇವ ವಿಧೀಯತೆ ॥

ಆಪಸ್ತಂಬನು ಕೃಷಿಯ ಬಗ್ಗೆಯೂ ಕೆಲವೊಂದು ನಿಯಮಗಳನ್ನು ತಿಳಿಸಿದ್ದಾನೆ. ಉಳುವ ಸಮಯದಲ್ಲಿ ನೇಗಿಲಿಗೆ ಎಷ್ಟು ಎತ್ತುಗಳನ್ನು ಕಟ್ಟುವುದು ಧರ್ಮಸಮ್ಮತವಾದುದು, ಎಂಬುದನ್ನು ತಿಳಿಸುತ್ತಾ ಅಧಾರ್ಮಿಕವಾದದ್ದು ಎಷ್ಟು ಎಂಬುದನ್ನೂ ಎಂಟು ಎತ್ತುಗಳನ್ನು ಕಟ್ಟುವುದು ಅತಿ ಶ್ರೇಷ್ಠ ಎಂಬುದನ್ನೂ ತಿಳಿಸಿದ್ದಾನೆ. ಆರು ಎತ್ತುಗಳನ್ನು ಕಟ್ಟುವುದು ಶ್ರೇಷ್ಠವೆಂದೂ, ನಾಲ್ಕು ಎತ್ತುಗಳನ್ನು ನೇಗಿಲಿಗೆ ಕಟ್ಟುವುದು ನಿರ್ದಯಿತ್ವವೆಂದೂ, ಎರಡು ಎತ್ತುಗಳನ್ನು ಕಟ್ಟುವುದು ನಿರ್ದಯತೆಯೆಂದೂ ಆತ ತಿಳಿಸಿದ್ದಾನೆ.

ಹಲಮಷ್ಟಗವಂ ಧರ್ಮ್ಯಂ
ಷಡ್ಗವಂ ಜೀವಿತಾರ್ಥಿನಾಂ
ಚತುರ್ಗವಂ ನೃಶಂಸಾನಾಂ
ದ್ವಿಗವಂ ಹಿ ಜಿಘಾಂಸಿನಾಮ್ (ಆಪ 1-23)

ಹಸುಗಳನ್ನು ಕಟ್ಟಿಹಾಕಬಾರದು. ಅದು ಅವುಗಳಿಗೆ ಬಂಧನದಂತಾಗುತ್ತದೆ. ತೆಂಗಿನನಾರು, ಧಾನ್ಯದ ಹೊಡೆ, ದರ್ಭೆಯ ತರಹದ ಹುಲ್ಲು ಅಥವಾ ಚರ್ಮದ ಹಗ್ಗಗಳಂತ ಕಠೋರವಾದವುಗಳಿಂದ ಕಟ್ಟಲೇಬಾರದು. ಇದರಿಂದ ಅವು ಪರಾಧೀನ ಅಥವಾ ಕಷ್ಟಕರವಾದ ಸನ್ನಿವೇಶವನ್ನು ಅನುಭವಿಸುತ್ತವೆ. ಅಗತ್ಯ ಕಂಡು ಬಂದಲ್ಲಿ ಕುಶ (ಹುಲ್ಲು) ಮೃದುವಾದ ಹಗ್ಗಗಳಿಂದ ಅವನ್ನು ಬಂಧಿಸಬಹುದು-

ನ ನಾರಿಕೇಲ ಬಾಲಾಭ್ಯಾಂ
ನ ಮುಂಜೇನ ನ ಚರ್ಮಣಾ
ಏಭಿರ್ಗಾಸ್ತು ನ ಬದ್ನೀಯಾತ್
ಬದ್ಧ್ವಾ ಪರವಶಾ ಭವೇತ್ ॥25॥
ಕುಶೈಃ ಕಾಶೈಶ್ಚ ಬದ್ನೀಯಾತ್ ॥1-26॥

ಈ ರೀತಿಯಲ್ಲಿ ಮೊದಲ ಅಧ್ಯಾಯದಲ್ಲಿ ಗೋಸೇವೆ, ಗೋಚಿಕಿತ್ಸೆ, ಗೋವಧದ ಪ್ರಾಯಶ್ಚಿತ್ತ - ಇತ್ಯಾದಿ ವಿಷಯಗಳನ್ನು ಸಂಕ್ಷೇಪವಾಗಿ ನಿರೂಪಿಸಲಾಗಿದೆ. ಇದರ ಮುಂದಿನ ಅಧ್ಯಾಯದಲ್ಲಿ ಶುದ್ಧಾಶುದ್ಧಿಯ ವಿವೇಚನೆ, ಸ್ಪರ್ಶಾಸ್ಪರ್ಶ - ಖಾದ್ಯಾಖಾದ್ಯ ವಿಮರ್ಶೆ, ಉಚ್ಛಿಷ್ಠ ಭೋಜನದ ಪ್ರಾಯಶ್ಚಿತ್ತ, ನೀಲಾವಸ್ತ್ರ ಧಾರಣೆಯ ನಿಷೇಧ, ರಜಸ್ವಲೆ ಇತ್ಯಾದಿಯವರುಗಳ ಸ್ಪರ್ಶಾಸ್ಪರ್ಶದ ಮೀಮಾಂಸೆ, ದೂಷಿತ ವಸ್ತುಗಳ ಶುದ್ಧಿಯ ವಿಧಾನ ಹಾಗೂ ಅಪೇಯ - ಪಾನ (ಕುಡಿಯಕೂಡದ ವಸ್ತುಗಳು) ಇತ್ಯಾದಿಗಳ ವರ್ಣನೆ ಇದೆ.

ಈ ಪ್ರಪಂಚದ ನಿಯಾಮಕನು ಯಮನಲ್ಲ ಎಂದು ಆಪಸ್ತಂಬನು ತಿಳಿಸುತ್ತಾನೆ. ಆತ್ಮವೇ ಯಮ, ಮನಸ್ಸು, ಬುದ್ಧಿ, ಇಂದ್ರಿಯಗಳ ಹತೋಟಿ ಇಟ್ಟುಕೊಂಡು ತನ್ನನ್ನು ತಾನು ಧರ್ಮಾಚರಣೆಯಲ್ಲಿ ತೊಡಗಿಸಿಕೊಳ್ಳುವವನನ್ನು ಯಮನು ತಾನೆ ಏನು ಮಾಡಿಯಾನು. ಧರ್ಮಶಾಸ್ತ್ರಾನುಕೂಲ ಆಚರಣೆ ಮಾಡುವವನನ್ನು ಪ್ರಪಂಚದಲ್ಲಿನ ಯಾರೂ ಏನೂ ಮಾಡಲಾರರು -

ನ ಯಮಂ ಯಮ
ಮಿತ್ಯಾಹುರಾತ್ಮಾ ವೈ ಯಮ ಉಚ್ಯತೇ ।
ಆತ್ಮಾ ಸಂಯಮಿತೋ ಯೇನ
ತಂ ಯಮಃ ಕಿಂ ಕರಿಷ್ಯತೇ ॥10-3॥

ಮಾನವನಲ್ಲಿನ ಕ್ರೋಧವು ಅವನನ್ನೇ ನಾಶ ಮಾಡುವಂತಹುದು. ಅದರಲ್ಲೂ ಸಾಧಕನಾದವನಿಗೆ ಇದು ವಿನಾಶಕರವಾದುದು. ಕ್ರೋಧವು ಸರ್ಪದವಿಷ ಅಥವಾ ಕತ್ತಿಯ ಅಲಗಿಗಿಂತಲೂ ಅಪಾಯಕಾರಿಯಾದುದು. ಅಂತರ್ಯದಲ್ಲಿ ನೆಲೆಸಿರುವ ಕ್ರೋಧವು ಸಂಬಂಧಿತ ವ್ಯಕ್ತಿಯನ್ನು ಸಂಹಾರಕನನ್ನಾಗಿ ಪರಿವರ್ತಿಸುತ್ತದೆ. ಇದಕ್ಕೆ ವಿರುದ್ಧವಾಗಿ ಧರ್ಮಶೀಲನೆಗೆ ಯಾವುದೇ ಕಷ್ಟವಿರುವುದಿಲ್ಲ. ರೂಪದ ಮಹಾನ್ ಗುಣವು ಈ ಲೋಕ ಹಾಗೂ ಪರಲೋಕಗಳಲ್ಲಿ ಸರ್ವತ್ರ ಸುಖದಾಯಿಯಾಗಿರುತ್ತದೆ. ಆದುದರಿಂದ ಸಾಧಕನು ಕ್ರೋಧವನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಅವನು ಸಹಿಷ್ಣುತೆ ಹಾಗೂ ದಯಾಗುಣಗಳನ್ನು ಹೊಂದಿರಬೇಕು. ಎಂತಹುದೇ ಜಪ, ಹೋಮ, ಯಜ್ಞ, ಪೂಜೆಗಳು ಇತ್ಯಾದಿ ಸತ್ಕರ್ಮಗಳನ್ನು,



## ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.



# ಮುಖ್ಯವಾದ ಟೆಲಿಫೋನ್ ನಂಬರುಗಳು

ಯಾತ್ರಿಕರಿಗೆ ಅಗತ್ಯವಾದ ಸೇವೆಗಳು, ಉತ್ಸವಗಳು, ವಸತಿ, ಶ್ರೀವಾರಿಸೇವೆ ಮೊದಲಾದ ಮುಖ್ಯ ಸಮಾಚಾರಗಳಿಗಾಗಿ ಕೆಳಗೆ ನೀಡಲಾಗಿರುವ ದೂರವಾಣಿ ಸಂಖ್ಯೆಗಳ ಮೂಲಕ ಆಯಾ ಅಧಿಕಾರಿಗಳನ್ನು ಸಂಪರ್ಕಿಸಬಹುದು.

| ತಿರುಪತಿ | | ತಿರುಮಲ | |
|---|---|---|---|
| ಎಸ್.ಟಿ.ಡಿ. ಕೋಡ್ | 08574 | ಎಸ್.ಟಿ.ಡಿ. ಕೋಡ್ | 08574 |
| ತಿ.ತಿ.ದೇ. ಎಕ್ಸ್‌ಚೇಂಜ್ | 31777 | ತಿ.ತಿ.ದೇ. ಎಕ್ಸ್‌ಚೇಂಜ್ | 77777 |
| ಕಾರ್ಯನಿರ್ವಹಣಾಧಿಕಾರಿ | 30977 | ಕಾರ್ಯನಿರ್ವಹಣಾಧಿಕಾರಿ | 77261 |
| ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ | 31877 | ಸಂಯುಕ್ತಕಾರ್ಯನಿರ್ವಹಣಾಧಿಕಾರಿ | 77218 |
| ಮುಖ್ಯ ಭದ್ರತಾಧಿಕಾರಿ | 31702 | ಡೆಪ್ಯೂಟಿ ಇ.ಓ. (ಆಲಯ) | 77199 |
| ಚೀಫ್ ಇಂಜನೀಯರ್ | 30660 | ವಿಜಿಲೆನ್ಸ್ ವಿಭಾಗ | 77395 |
| ಜನರಲ್ ಮ್ಯಾನೇಜರ್ (ಸಾರಿಗೆ) | 31608 | ಆರ್ಜಿತ ಸೇವೆಗಳು | 79277 |
| ಡೆಪ್ಯೂಟಿ ಇ.ಓ. (ಸ್ಥಳೀಯ ಆಲಯ) | 24084 | ವಸತಿ | 77777 - 3626 |
| ಡೆಪ್ಯೂಟಿ ಇ.ಓ. (ಸ್ವಾಗತ) | 43972 | ಶ್ರೀವಾರಿ ಸೇವಾವಿಭಾಗ | 79693 |
| ಕೇಂದ್ರ ಸ್ವಾಗತ ಕಚೇರಿ | 43091 | ಡಯಲ್ ಯುವರ್ ಇ.ಓ. | 77261 |
| ಪೌರ ಸಂಬಂಧಾಧಿಕಾರಿ | 32813 | (ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00) | |
| ಅನ್ನಮಾಚಾರ್ಯ ಪ್ರಾಜೆಕ್ಟ್ | 87106 | ಅಶ್ವನೀ ಆಸ್ಪತ್ರೆ | 77477 |
| ಧರ್ಮಪ್ರಚಾರ ಪರಿಷತ್ | 30893 | ಎಸ್.ವಿ. ಅತಿಥಿ ಗೃಹ | 77777- 3647 |
| ವನಾಭಿವೃದ್ಧಿ ಯೋಜನೆ | 30138 | ಎಸ್.ಪಿ. ಅತಿಥಿ ಗೃಹ | 77275 |
| ಬರ್ಡ್ ಆಸ್ಪತ್ರೆ | 87484 | ಆರ್.ಟಿ.ಸಿ. ಬಸ್ ನಿಲ್ದಾಣ | 77248 |
| ಸ್ವಿಮ್ಸ್ ಆಸ್ಪತ್ರೆ | 87777 | ಪೋಸ್ಟಾಫೀಸು | 77221 |
| ರುಯಾ ಆಸ್ಪತ್ರೆ | 86666 | | |
| ಆರ್.ಟಿ.ಸಿ. ವಿಚಾರಣಾ ಕೇಂದ, | 25333 | | |
| ರೈಲ್ವೆ ವಿಚಾರ | | | |
| ಎಸ್.ವಿ. ಅತಿ | | | |
| ಎಸ್.ಪಿ. ಅತಿ | | | |
| ಅಲಿಪಿರಿ ಅತಿಥಿ | | | |
| ಜನರಲ್ ಫ್ಯಾ | | | |
| ಅನ್ನದಾನಂ ಕ | | | |

ಯಾತ್ರಿಕರು ತಮ್ಮ ಯಾತ್ರೆಯನ್ನು ಸುಖಕರವಾಗಿಸಿಕೊಳ್ಳಲು ಮೇಲ್ಕಂಡ ದೂರವಾಣಿ ಸಂಖ್ಯೆಗಳ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

g & WWW.tirupati.org
umala.org

ಕಾರ್ಯನಿರ್ವಹಣಾಧಿಕಾರಿ.

ಧರ್ಮ ಕಾರ್ಯಗಳನ್ನು ಮಾಡಿದಾಗ್ಯೂ, ಅಂತಹವನಲ್ಲಿ ಕ್ರೋಧವಿದ್ದಾಗ, ಆ ಕರ್ಮಗಳೆಲ್ಲ ನಿಷ್ಫಲವಾಗುತ್ತವೆ. ಹಸಿದಾರ ನೀರಿನಲ್ಲಿ ಇರಬಲ್ಲುದೆ?

ಜೀವಿಗಳಲ್ಲೆಲ್ಲ ಇರಬೇಕಾದ ಅತ್ಯಂತ ದೊಡ್ಡ ಗುಣವೆಂದರೆ ಕ್ಷಮಾಗುಣ.

ಕ್ಷಮಾಗುಣೋ ಹಿ ಜಂತೂನಾಮಿಹಾಮುತ್ರ ಸುಖಪ್ರದಃ ||10-15|| ಈ ಕ್ಷಮಾಗುಣವೇ ಈ ಲೋಕ, ಪರಲೋಕಗಳೆರಡರಲ್ಲೂ ಸುಖ ದಾಯಕವಾದುದು.

ಭಾರತವು ಸಂತರಿಂದ ಕೂಡಿದ ದೇಶ. ಈ ಎಲ್ಲ ಸಂತರೂ ಕ್ಷಮಾ ಶೀಲರು. ವಸಿಷ್ಠರಂತಹವರು ಈ ಗುಂಪಿಗೆ ಸೇರಿದವರು.

ಕಡೆಯಲ್ಲಿ ಅತ್ಯಂತ ಮಹತ್ವಪೂರ್ಣವಾದ ಉಪದೇಶವನ್ನು ನೀಡಲಾಗಿದೆ. 10 ಮತ್ತು 11 ಅಧ್ಯಾಯಗಳಲ್ಲಿ ಆತ್ಮಜ್ಞಾನದ ಸೂಕ್ಷ್ಮವಿವೇಚನೆ ಇದೆ.

ಮಾತೃವತ್ ಪರದಾರಾಂಶ್ಚ
ಪರದ್ರವ್ಯಾಣಿ ಲೋಷ್ಠವತ್ ।
ಆತ್ಮವತ್ ಸರ್ವಭೂತಾನಿ
ಯಃ ಪಶ್ಯತಿ ಸ ಪಶ್ಯತಿ ||10-11||

ಪರಸ್ತ್ರೀಯು ಮಾತೃಸಮಾನಳು. ಪರದ್ರವ್ಯವು ಮಣ್ಣಿಗೆ ಸಮ, ಎಲ್ಲ ಜೀವಿಗಳೂ ತನ್ನ ಸಮ - ಎಂದು ಯಾರು ತಿಳಿಯುವನೊ ಅಂತಹವನೇ ಆತ್ಮದ್ರಷ್ಟಾರನಾಗಿರುತ್ತಾನೆ.

ಪ್ರಾಪಂಚಿಕ ವಿಷಯಗಳಲ್ಲಿ, ಇಂದ್ರಿಯ ಭೋಗಗಳಲ್ಲಿ ಯಾರು ಅನಾಸಕ್ತರಾಗಿರುವರೊ, ಸದಾ ಅಹಿಂಸಾಮೃತವನ್ನು ಅನುಸರಿಸುವರೊ ಅಂತಹವರು ನಿಜವಾದ ಅರ್ಥದ ಸಾಧಕ ರಾಗಿರುತ್ತಾರೆ -

ಮೋಕ್ಷೋ ಭವೇತ್
ಪ್ರೀತಿ ನಿವರ್ತಕಸ್ಯ
ಆಧ್ಯಾತ್ಮಯೋಗೈಕ
ರತಸ್ಯ ಸಮ್ಯಕ್ ।
ಮೋಕ್ಷೋ ಭವನ್ನಿತ್ಯ
ಮಹಿಂಸ ಕಸ್ಯ
ಸ್ವಾಧ್ಯಾಯ ಯೋಗಾ
ಗತಮಾನಸಸ್ಯ ||10-7||

(ಆಧಾರ)

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲಮೂಲ : **ಡಾ|| ಎನ್. ರಮೇಶನ್**, ಐ.ಎ.ಎಸ್.
ಕನ್ನಡಾನುವಾದ : **ಬಿ. ಎನ್. ಶ್ರೀನಿವಾಸನ್**. ಎಂ.ಎ.

## ವಿಚಾರಣಕರ್ತರಾಗಿ ಆರುಮಂದಿ ಮಹಂತರು

(ಮುಂದುವರೆದಿದೆ.)

1843 ರಿಂದ 1933 ರವರೆಗೆ ಮಹಂತರ ಆರು ತಲೆಮಾರು, ಶಿಷ್ಯಪ್ರಶಿಷ್ಯರ ಮೂಲಕ ತಿರುಮಲೆಯ ಆಲಯದ ವಿಚಾರಣಕರ್ತರಾಗಿ ಕೆಲಸ ನಿರ್ವಹಿಸಿದರು. ಆಲಯದ ಶಾಸನಗಳು ಇವರಲ್ಲಿನ ಮೂವರು ಸಲ್ಲಿಸಿದ ಹಲವು ಸೇವೆಗಳನ್ನು ದಾಖಲಿಸುತ್ತವೆ. ಶಕ ವರ್ಷ 1771 ರಲ್ಲಿ (31-8-1849) ಸೌಮ್ಯಸಂವತ್ಸರದ ಒಂದು ಗುರುವಾರ ಮಾರ್ಕಂಡೇಯ, ಅಗ್ನಿ, ಯಮ, ಅಗಸ್ತ್ಯ ವಸಿಷ್ಠ, ವರುಣ, ವಾಯು, ಕುಬೇರ, ಗಾಲವ, ಸರಸ್ವತೀ ತೀರ್ಥಗಳನ್ನು (ಒಟ್ಟು ಒಂಭತ್ತು) ಒಳಗೊಂಡ ಶ್ರೀನಿವಾಸ ತೀರ್ಥ, ವರಾಹತೀರ್ಥಗಳು ಸೇರಿದ್ದಂತಹ ಸ್ವಾಮಿ ಪುಷ್ಕರಿಣಿಯನ್ನು ಮೊದಲನೆಯ ಮಹಂತ ಸೇವಾದಾಸನು ಜೀರ್ಣೋದ್ಧಾರ ಗೊಳಿಸಿದನು. ನಂತರ ಈ ಪುಷ್ಕರಿಣಿಯಲ್ಲಿ ಶ್ರೀನಿವಾಸ ಪದ್ಮಾವತಿಯವರ ತೆಪ್ಪೋತ್ಸವವನ್ನು ಪುನಃ ಪ್ರಾರಂಭಿಸಿದ. ಸಂಸ್ಕೃತ ಗದ್ಯದಲ್ಲಿರುವ ಈ ಶಾಸನವು (350 ತಿ.ತಿ.) ತೆಲುಗು ಲಿಪಿಯಲ್ಲಿದೆ. ಇದರದೇ ಮತ್ತೊಂದು ಪ್ರತಿಯು (351 ಜಿ.ಟಿ.) ದೇವನಾಗರಿ ಲಿಪಿಯಲ್ಲಿದೆ.

ನಂತರದ ವಿಚಾರಣ ಕರ್ತನಾದ ಸೇವಾದಾಸನ ಶಿಷ್ಯ ಮಹಂತ ಧರ್ಮದಾಸನು 10-2-1878 ರಲ್ಲಿ ಶಕವರ್ಷದ ರಕ್ತಾಕ್ಷಿ ಸಂವತ್ಸರದಲ್ಲಿ ಕಪಿಲತೀರ್ಥದ ಮೆಟ್ಟಿಲುಗಳನ್ನು ಜೀರ್ಣೋದ್ಧಾರ ಮಾಡಿಸಿ, ಅದರ ಪೂರ್ವ ಪಶ್ಚಿಮಗಳಲ್ಲಿನ ಮಂಟಪಗಳನ್ನು ದುರಸ್ತಿ ಮಾಡಿಸಿದನು. ಈತನು ಬಹುಧಾನ್ಯ ಸಂವತ್ಸರದಲ್ಲಿ (11-9-1878) ಶ್ರೀ ವೆಂಕಟೇಶ್ವರಸ್ವಾಮಿಯ - ಪಡಿಕಾವಲಿ ಗೋಪುರವೆಂದು ಕರೆಯಲಾಗುವ ಮಹಾದ್ವಾರ ಗೋಪುರವನ್ನೂ ಅದರ ಪಕ್ಕದಲ್ಲಿ ಹಲವು ಮಂಟಪಗಳನ್ನು ನಿರ್ಮಾಣಮಾಡಿಸಿದನೆಂದೂ ತೆಲುಗು ಸೀಸಪದ್ಯವೊಂದು (382 ತಿ.ತಿ.) ತಿಳಿಸುತ್ತದೆ.

ಆರನೆಯ ಹಾಗೂ ಕಡೆಯ ವಿಚಾರಣಕರ್ತನಾದ ಮಹಂತ ಪ್ರಯಾಗ ದಾಸನ ಆಡಳಿತಕಾಲದಲ್ಲಿ ಈತನ ಸಹೋದರನಾದ ಶಿಷ್ಯ ರಾಮ ಲಕ್ಷ್ಮಣದಾಸನು ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ವಿಮಾನದ ಮೇಲೆ ಚಿನ್ನದ ಕಲಶವನ್ನು



ಕಲಿಯುಗದ 5010 ನೇ ವರ್ಷದಲ್ಲಿ ಎಂದರೆ ಕೀಲಕನಾಮಸಂವತ್ಸರದಲ್ಲಿ - 30-9-1908ರಲ್ಲಿ (242 ತಿ.ತಿ.) ಸ್ಥಾಪಿಸಿದನು.

### ಗೋಪಾಲಾಚಾರ್ಲು ಅವರ ಕಥನ ಮಹಂತ ಸೇವಾದಾಸ

ಮೊದಲನೆಯ ವಿಚಾರಣಕರ್ತ ಮಹಂತ ಸೇವಾದಾಸನು ಹಲವಾರು ಕೈಂಕರ್ಯಗಳನ್ನು ಸಲ್ಲಿಸಿದನೆಂದು ಗೋಪಾಲಾಚಾರ್ಲು ವರದಿ ಮಾಡಿದ್ದಾರೆ. ಅದರಂತೆ ಆತ ಸ್ವಾಮಿಗೆ ಚಿನ್ನದ ಪೀತಾಂಬರದ ಏರ್ಪಾಡು ಮಾಡಿದನು. ಒಂದು ಚಿನ್ನದ ಯಜ್ಞೋಪವೀತ ಮಾಡಿಸಿದ. ಚಿನ್ನದ ಪದ್ಮ ಪೀಠವನ್ನು ಮಾಡಿಸಿದ. ರತ್ನಗಳ ಕಿವಿಯೋಲೆಗಳನ್ನು ಮಾಡಿಸಿದ. ಸ್ವಾಮಿಯ ಕೈಗಳಿಗೆ ನಾಗಾಭರಣಗಳನ್ನು ಮಾಡಿಸಿದ. ಸ್ವಾಮಿಯ ಕೀರೀಟದ ತಳಭಾಗಕ್ಕೆ ವಜ್ರಗಳ ಪಟ್ಟಿಯನ್ನು ಏರ್ಪಡಿಸಿದ. ಶ್ರೀ ವೆಂಕಟೇಶ್ವರ ಸ್ವಾಮಿಯ ಉತ್ಸವ ವಿಗ್ರಹಕ್ಕೆ ವೈರಮುಡಿ ಯೊಂದನ್ನು ಮಾಡಿಸಿದ. ಜೊತೆಗೇ ಮುತ್ತಿನ ಒಂದು ಕಿರೀಟವನ್ನೂ, ಪಾದಹಸ್ತಗಳಿಗೆ ಬೆಳ್ಳಿಯ ಮುಲಾಮಿನ ಕವಚಗಳನ್ನೂ, ಶ್ರೀ ಭೂದೇವಿಯರಿಗೆ ಎರಡು ರಾಜಮುಡಿಗಳನ್ನೂ ಮಾಡಿಸಿದನು. ಗರ್ಭಗೃಹದ ಕುಲಶೇಖರ ಪಡಿಯ ದಾಲಮಂದ್ರಕ್ಕೆ ಒಂದು ಜಾಲಂದ್ರದ ಬಾಗಿಲನ್ನು ತಯಾರಿಸಿದ. ಶಯನ ಸೆಜ್ಜೆಗೆ ನಾಲ್ಕು ಬೆಳ್ಳಿಯ ಸರಪಳಿ ಮಾಡಿಸಿದ. ಉತ್ಸವ ಮೂರ್ತಿಗಳಿಗೆ ಸಿಂಹದ ಮುಖವಿರುವ ಪೀಠಗಳನ್ನು ತಯಾರಿಸಿ ನೀಡಿದ. ಒಳ ಪ್ರದಕ್ಷಿಣಾ ಪಥವಾದ ಮುಕ್ಕೋಟಿ ಪ್ರದಕ್ಷಿಣೆಯನ್ನು ದುರಸ್ತಿ ಮಾಡಿಸಿ ಉತ್ಸ ಮೂರ್ತಿಗಳನ್ನು ವಜ್ರಕವಚಾದ್ಯಲಂಕಾರ ಗಳೊಂದಿಗೆ ಮುಕ್ಕೋಟಿ ಏಕಾದಶಿಯಂದು ಇಲ್ಲಿ ಇರಿಸಲು ಆರಂಭಿಸಿದರೂ, ನಂತರ ಸ್ವಲ್ಪ ಕಾಲದಲ್ಲಿಯೇ ಈ ಇಕ್ಕಟ್ಟಾದ ಪ್ರದೇಶದಲ್ಲಿ ಯಾತ್ರಿಕರ ನೂಕು ನುಗ್ಗಲು ಉಂಟಾಗುವು ದೆಂಬ ಭಯದಿಂದ ಇದನ್ನು ನಿಲ್ಲಿಸಿದನು. ಸ್ವಾಮಿ ಪುಷ್ಕರಿಣಿಯನ್ನು ಮರಮತ್ತು ಮಾಡಿಸಿ, ಪಾತ ಪುಷ್ಕರಿಣಿಯಿಂದ (ಪಶ್ಚಿಮ ದಿಕ್ಕಿನಲ್ಲಿರುವಂತಹ ಅಚ್ಯುತರಾಯ ಕೋನೇರು) (ಈಗಿನ ಪಿ.ಪಿ. ಷೆಡ್ಸ್) ಸುರಂಗ ಮಾರ್ಗದಲ್ಲಿ ನೀರು ಹರಿದು ಸ್ವಾಮಿ ಪುಷ್ಕರಿಣಿಗೆ ಬರುವಂತೆ ಕಾಲುವೆಯನ್ನು ಏರ್ಪಡಿಸಿದನು. ದೇವರ ಮೆರವಣಿಗೆಗಾಗಿ



## ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.



# ಮುಖ್ಯವಾದ ಟೆಲಿಫೋನ್ ನಂಬರುಗಳು

ಯಾತ್ರಿಕರಿಗೆ ಅಗತ್ಯವಾದ ಸೇವೆಗಳು, ಉತ್ಸವಗಳು, ವಸತಿ, ಶ್ರೀವಾರಿಸೇವೆ ಮೊದಲಾದ ಮುಖ್ಯ ಸಮಾಚಾರಗಳಿಗಾಗಿ ಕೆಳಗೆ ನೀಡಲಾಗಿರುವ ದೂರವಾಣಿ ಸಂಖ್ಯೆಗಳ ಮೂಲಕ ಆಯಾ ಅಧಿಕಾರಿಗಳನ್ನು ಸಂಪರ್ಕಿಸಬಹುದು.

**ತಿರುಪತಿ**

| | |
|---|---|
| ಎಸ್.ಟಿ.ಡಿ. ಕೋಡ್ | 08574 |
| ತಿ.ತಿ.ದೇ. ಎಕ್ಸ್‌ಚೇಂಜ್ | 31777 |
| ಕಾರ್ಯನಿರ್ವಹಣಾಧಿಕಾರಿ | 30977 |
| ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ | 31877 |
| ಮುಖ್ಯ ಭದ್ರತಾಧಿಕಾರಿ | 31702 |
| ಚೀಫ್ ಇಂಜನೀಯರ್ | 30660 |
| ಜನರಲ್ ಮ್ಯಾನೇಜರ್ (ಸಾರಿಗೆ) | 31608 |
| ಡೆಪ್ಯೂಟಿ ಇ.ಓ. (ಸ್ಥಳೀಯ ಆಲಯ) | 24084 |
| ಡೆಪ್ಯೂಟಿ ಇ.ಓ. (ಸ್ವಾಗತ) | 43972 |
| ಕೇಂದ್ರ ಸ್ವಾಗತ ಕಚೇರಿ | 43091 |
| ಪೌರ ಸಂಬಂಧಾಧಿಕಾರಿ | 32813 |
| ಅನ್ನಮಾಚಾರ್ಯ ಪ್ರಾಜೆಕ್ಟ್ | 87106 |
| ಧರ್ಮಪ್ರಚಾರ ಪರಿಷತ್ | 30893 |
| ವನಾಭಿವೃದ್ಧಿ ಯೋಜನೆ | 30138 |
| ಬರ್ಡ್ ಆಸ್ಪತ್ರೆ | 87484 |
| ಸ್ವಿಮ್ಸ್ ಆಸ್ಪತ್ರೆ | 87777 |
| ರುಯಾ ಆಸ್ಪತ್ರೆ | 86666 |
| ಆರ್.ಟಿ.ಸಿ. ವಿಚಾರಣಾ ಕೇಂದ, | 25333 |
| ರೈಲ್ವೆ ವಿಚಾರ | |
| ಎಸ್.ವಿ. ಅತಿ | |
| ಎಸ್.ಪಿ. ಅತಿ | |
| ಅಲಿಪಿರಿ ಅತಿಥಿ | |
| ಜನರಲ್ ಫ್ಯಾ | |
| ಅನ್ನದಾನಂ ಕ | |

**ತಿರುಮಲ**

| | |
|---|---|
| ಎಸ್.ಟಿ.ಡಿ. ಕೋಡ್ | 08574 |
| ತಿ.ತಿ.ದೇ. ಎಕ್ಸ್‌ಚೇಂಜ್ | 77777 |
| ಕಾರ್ಯನಿರ್ವಹಣಾಧಿಕಾರಿ | 77261 |
| ಸಂಯುಕ್ತಕಾರ್ಯನಿರ್ವಹಣಾಧಿಕಾರಿ | 77218 |
| ಡೆಪ್ಯೂಟಿ ಇ.ಓ. (ಆಲಯ) | 77199 |
| ವಿಜಿಲೆನ್ಸ್ ವಿಭಾಗ | 77395 |
| ಆರ್ಜಿತ ಸೇವೆಗಳು | 79277 |
| ವಸತಿ | 77777 - 3626 |
| ಶ್ರೀವಾರಿ ಸೇವಾವಿಭಾಗ | 79693 |
| ಡಯಲ್ ಯುವರ್ ಇ.ಓ. (ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00) | 77261 |
| ಅಶ್ವನೀ ಆಸ್ಪತ್ರೆ | 77477 |
| ಎಸ್.ವಿ. ಅತಿಥಿ ಗೃಹ | 77777- 3647 |
| ಎಸ್.ಪಿ. ಅತಿಥಿ ಗೃಹ | 77275 |
| ಆರ್.ಟಿ.ಸಿ. ಬಸ್ ನಿಲ್ದಾಣ | 77248 |
| ಪೋಸ್ಟಾಫೀಸು | 77221 |

ಯಾತ್ರಿಕರು ತಮ್ಮ ಯಾತ್ರೆಯನ್ನು ಸುಖಕರವಾಗಿಸಿಕೊಳ್ಳಲು ಮೇಲ್ಕಂಡ ದೂರವಾಣಿ ಸಂಖ್ಯೆಗಳ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

g & WWW.tirupati.org
umala.org

**ಕಾರ್ಯನಿರ್ವಹಣಾಧಿಕಾರಿ.**

ಧರ್ಮ ಕಾರ್ಯಗಳನ್ನು ಮಾಡಿದಾಗ್ಯೂ, ಅಂತಹವನಲ್ಲಿ ಕ್ರೋಧವಿದ್ದಾಗ, ಆ ಕರ್ಮಗಳೆಲ್ಲ ನಿಷ್ಫಲವಾಗುತ್ತವೆ. ಹಸಿದಾರ ನೀರಿನಲ್ಲಿ ಇರಬಲ್ಲುದೆ?

ಜೀವಿಗಳಲ್ಲೆಲ್ಲ ಇರಬೇಕಾದ ಅತ್ಯಂತ ದೊಡ್ಡ ಗುಣವೆಂದರೆ ಕ್ಷಮಾಗುಣ.

ಕ್ಷಮಾಗುಣೋ ಹಿ ಜಂತೂನಾಮಿಹಾಮುತ್ರ ಸುಖಪ್ರದಃ ।।10-15।। ಈ ಕ್ಷಮಾಗುಣವೇ ಈ ಲೋಕ, ಪರಲೋಕಗಳೆರಡರಲ್ಲೂ ಸುಖ ದಾಯಕವಾದುದು.

ಭಾರತವು ಸಂತರಿಂದ ಕೂಡಿದ ದೇಶ. ಈ ಎಲ್ಲ ಸಂತರೂ ಕ್ಷಮಾ ಶೀಲರು. ವಸಿಷ್ಠರಂತಹವರು ಈ ಗುಂಪಿಗೆ ಸೇರಿದವರು.

ಕಡೆಯಲ್ಲಿ ಅತ್ಯಂತ ಮಹತ್ವಪೂರ್ಣವಾದ ಉಪದೇಶವನ್ನು ನೀಡಲಾಗಿದೆ. 10 ಮತ್ತು 11 ಅಧ್ಯಾಯಗಳಲ್ಲಿ ಆತ್ಮಜ್ಞಾನದ ಸೂಕ್ಷ್ಮ ವಿವೇಚನೆ ಇದೆ.

ಮಾತೃವತ್ ಪರದಾರಾಂಶ್ಚ
ಪರದ್ರವ್ಯಾಣಿ ಲೋಷ್ಟವತ್ ।
ಆತ್ಮವತ್ ಸರ್ವಭೂತಾನಿ
ಯಃ ಪಶ್ಯತಿ ಸ ಪಶ್ಯತಿ ।।10-11।।

ಪರಸ್ತ್ರೀಯು ಮಾತೃಸಮಾನಳು. ಪರದ್ರವ್ಯವು ಮಣ್ಣಿಗೆ ಸಮ, ಎಲ್ಲ ಜೀವಿಗಳೂ ತನ್ನ ಸಮ - ಎಂದು ಯಾರು ತಿಳಿಯುವನೊ ಅಂತಹವನೇ ಆತ್ಮದ್ರಷ್ಟಾರನಾಗಿರುತ್ತಾನೆ.

ಪ್ರಾಪಂಚಿಕ ವಿಷಯಗಳಲ್ಲಿ, ಇಂದ್ರಿಯ ಭೋಗಗಳಲ್ಲಿ ಯಾರು ಅನಾಸಕ್ತರಾಗಿರುವರೊ, ಸದಾ ಅಹಿಂಸಾಮೃತವನ್ನು ಅನುಸರಿಸುವರೊ ಅಂತಹವರು ನಿಜವಾದ ಅರ್ಥದ ಸಾಧಕ ರಾಗಿರುತ್ತಾರೆ -

ಮೋಕ್ಷೋ ಭವೇತ್
ಪ್ರೀತಿ ನಿವರ್ತಕಸ್ಯ
ಅಧ್ಯಾತ್ಮಯೋಗೈಕ
ರತಸ್ಯ ಸಮ್ಯಕ್ ।
ಮೋಕ್ಷೋ ಭವನ್ನಿತ್ಯ
ಮಹಿಂಸಕಸ್ಯ
ಸ್ವಾಧ್ಯಾಯ ಯೋಗಾ
ಗತಮಾನಸಸ್ಯ ।।10-7।।

(ಆಧಾರ)

ಸನರ ಕಾಸು, ಇಕ್ಕೇರಿ ವರಹಗಳು - ಇದ್ದಂತಹ ಒಟ್ಟು ಎರಡು ಲಕ್ಷ ರೂಪಾಯಿ ಮೌಲ್ಯದ ಧನರಾಶಿಯು ದೊರೆಯಿತೆಂದು ಹೇಳಲಾಗಿದೆ. ಇದನ್ನು ಜಿಲ್ಲಾ ನ್ಯಾಯಾಲಯದಲ್ಲಿ ಪ್ರಾಚೀನ ಧನಭಂಡಾರವೆಂದು ಕಾಪಿಡಲಾಯಿತು. ವೈಖಾನಸ ಆಗಮದ ಪ್ರಾಕಾರ ಇದರ ಪ್ರಭುತ್ವವನ್ನು ಪ್ರಮಾಣ ಪೂರ್ವಕವಾಗಿ ಸ್ಥಾಪಿಸಿದ ನಂತರ ಆಲಯಕ್ಕೆ ಹಿಂದಿರುಗಿಸಿ ನೀಡಲಾಯಿತು. ಇದನ್ನು ಆಲಯ ಭಂಡಾರಕ್ಕೆ ಸೇರಿಸಲಾಯಿತು.

ತಿರುಪತಿಯಲ್ಲಿ ಶ್ರೀ ಗೋವಿಂದ ರಾಜಸ್ವಾಮಿಯ ಗರ್ಭಗುಡಿಯನ್ನು ದುರಸ್ತಿ ಮಾಡಿಸಿ ಗೋವಿಂದರಾಜಸ್ವಾಮಿಯ ವಿಗ್ರಹವನ್ನು ಪುನಃ ಪ್ರತಿಷ್ಠಾಪಿಸಿದ. (ಜಡ ಬಂಧನಂ) ಗೋವಿಂದರಾಜನಿಗೂ ಆತನ ಉಭಯನಾಯಕಿಯರಿಗೂ ಚಿನ್ನದ ಕಿವಿ ಯೋಲೆಗಳನ್ನೂ, ಚಿನ್ನದ ಕಿರೀಟಗಳನ್ನೂ ಮಾಡಿಸಿದನು. ಶಾಲನಾಚ್ಚಿಯಾರ್ ಗುಡಿ ಯಲ್ಲಿದ್ದ ಧಾನ್ಯದ ಉಗ್ರಾಣವನ್ನು ತೆಗೆಸಿದನು. ದ್ವಾರಪಾಲಕ ಮಂಟಪದಿಂದ ಭಾಷ್ಯಕಾರರ ಆಲಯದವರೆಗೆ ಮಂಟಪಗಳನ್ನು ನಿರ್ಮಿ ಸಿದನು. ಕೂರತ್ತಾಳ್ವಾರರಿಗೆ ಹೊಸ ಆಲಯವನ್ನು ನಿರ್ಮಿಸಿ, ಅದರಲ್ಲಿ ಭೂದತ್ತಾಳ್ವಾರರನ್ನೂ ಸ್ಥಾಪಿಸಿದನು. ಉತ್ತರದ ಕಡೆಯಲ್ಲಿದ್ದ ಹೂವಿನ ತೋಟವನ್ನು ಮಂಟಪಗಳನ್ನಾಗಿ ಮಾಡಿ ಅಲ್ಲಿ ದೇವರ ವಾಹನಗಳನ್ನು ಇಡುವ ಏರ್ಪಾಡು ಮಾಡಿದನು.

## ಮಹಂತ ಭಗವಾನ್ ದಾಸ

1880 ರಲ್ಲಿ ಮಹಂತ ಧರ್ಮದಾಸನ ನಂತರ ಮಹಂತ ಭಗವಾನ್‌ದಾಸನು ವಿಚಾರಣಕರ್ತನಾದ. ಈತ ತನ್ನ ಗುರುವನ್ನೇ ದುರಸ್ತಿಕಾರ್ಯಕ್ರಮಗಳಲ್ಲಿ ಅನುಸರಿಸಿದನು.

ಈತನು ತಿರುಮಲೆಯಲ್ಲಿ ಧ್ವಜಸ್ತಂಭವನ್ನು ರಿಪೇರಿ ಮಾಡಿಸಿ, ಹಲವಾರು ಮಂಟಪಗಳನ್ನು ನಿರ್ಮಿಸಿದ. ತಿರುಪತಿಯ ಕಚೇರಿಯಿಂದ ತಿರುಮಲೆಯ ಆಲಯಕ್ಕೆ ದೂರವಾಣಿ (ಟೆಲಿಫೋನ್) ಸೌಕರ್ಯವನ್ನು ಏರ್ಪಡಿಸಿದ ಕೊಳವೆನಲ್ಲಿಯಲ್ಲಿ ನೀರು ಬರುವಂತೆ ಮಾಡಿದ. ಕೆರೆಯ ದಕ್ಷಿಣಕ್ಕೆ ಒಂದು ಭವನವನ್ನು ರಾಜ್ಯಪಾಲರೇ ಮತ್ತಿತರ ಹಿರಿಯರಿಗಾಗಿ ನಿರ್ಮಿಸಿದನು.

ತಿರುಪತಿಯಲ್ಲಿ ಈತನು ಒಂದು ಪುಷ್ಪ ತೋಟವನ್ನು ನಿರ್ಮಿಸಿದನು. ಪ್ರೌಢಶಾಲೆ ಯನ್ನು ಕಟ್ಟಿಸಿದನು. ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ, ನೈವೇದ್ಯದ ಪ್ರಸಾದಗಳನ್ನು ಯಾತ್ರಿಕರಲ್ಲಿ ಹಂಚಲು ಏರ್ಪಾಡು ಮಾಡಿದನು.

ತನ್ನ ಗುರು ಧರ್ಮದಾಸನು ಈ ಮೊದಲೇ ನೀಡಿದ್ದ ಸಾಲದ ಜೊತೆಗೇ ಮತ್ತಷ್ಟು ಲಕ್ಷ ರೂಪಾಯಿಗಳ ಪ್ರಮಾಣದಲ್ಲಿ ಕಾರ್ವೇಟಿ ನಗರದ ರಾಜ (ಜಮೀಂದಾರ)ನಿಗೆ, ತಿರುತ್ತಣಿ ತಾಲ್ಲೂಕಿನ ವರಮಾನದ ಅಡಮಾನದ ಆಧಾರದಲ್ಲಿ ಸಾಲ ನೀಡಿದನು. ಇದರಂತೆಯೇ ಶ್ರೀ ಕಾಳಹಸ್ತಿಯ ರಾಜ (ಜಮೀಂದಾರ)ನಿಗೆ ಕಚ್ಚಿನಾಡು ತಾಲೂಕಿನ ಆಧಾರದಲ್ಲಿ ಸಾಲ ನೀಡಿದನು.

ತಿರುಪತಿಯಲ್ಲಿನ ಕೋದಂಡರಾಮಸ್ವಾಮಿ ಆಲಯದ ಉತ್ಸವಮೂರ್ತಿಗೆ ಚಿನ್ನದ ಮುಲಾಮು ಮಾಡಿಸಿದ ಮಕರ ತೋರಣವನ್ನು ಮಾಡಿಸಿದನು. ಎರಡು ಭುಜಬಂಧಗಳನ್ನು ವಜ್ರಗಳನ್ನು ಜೋಡಿಸಿದಂತೆ ಮಾಡಿಸಿದ. ಒಂದು ಕಲಿಕಿ ತುರಾಯಿ, ಒಂದು ರತ್ನಗಳಿಂದ ಕೂಡಿದ ಕಟಿಬಂಧ (ಒಡ್ಯಾಣ) ಒಂದು ರತ್ನಗಳ ಮಕರಕಂಠಿ, ರತ್ನಗಳನ್ನು ಹುದುಗಿಸಿದ ಎರಡು ಪದಕಗಳು, ಒಂದು ರತ್ನದ ಚೂಡಾಮಣಿ, ಚಿನ್ನದ ಎರಡು ಕಾಸಿನ ಸರಗಳನ್ನು ಮಾಡಿಸಿ ತಿರುಪತಿಯ ತಿರುಚಾನೂರಿನ ಆಲಯಗಳ ದೇವತೆಗಳ ಬಳಕೆಗೆಂದು ತಿರುಪತಿಯ ಖಜಾನೆಯಲ್ಲಿಟ್ಟನು.

ತಿರುಪತಿಯಲ್ಲಿ ದೇವರ ಮೆರವಣಿಗೆಗೆಂದು ಬೆಳ್ಳಿಯ ಕವಚದ ಸೂರ್ಯಪ್ರಭವಾಹನ ಹಾಗೂ ಸರ್ವಭೂಪಾಲವಾಹನಗಳನ್ನು ಮಾಡಿಸಿದನು.

ತಿರುಚಾನೂರಿನಲ್ಲಿ ಈತನು ಸುಂದರ ರಾಜಸ್ವಾಮಿಯ ಆಲಯದ ಧ್ವಜಸ್ತಂಭದ ಸುತ್ತಲೂ ಮಂಟಪವನ್ನು ನಿರ್ಮಿಸಿದನು.


ಮಹಂತ ಪ್ರಯಾಗದಾಸ

ತೆಪ್ಪಕೊಳದಲ್ಲಿ ನಿರಾಳಿ ಮಂಟಪವನ್ನು ನಿರ್ಮಿಸಿ ನಿಂತು ಹೋಗಿದ್ದ ತೆಪ್ಪೋತ್ಸವವನ್ನು ಆರಂಭಿಸಿದನು.

## ಮಹಂತ ಮಹಾವೀರದಾಸ

ಮಹಂತ ಭಗವಾನ್‌ದಾಸನ ಶಿಷ್ಯನೂ ಉತ್ತರಾಧಿ ಕಾರಿಯೂ ಆದ ಮಹಂತ ಮಹಾವೀರದಾಸನು 1890 ರಿಂದ 1894 ರವರೆಗೆ ವಿಚಾರಣಕರ್ತನಾಗಿದ್ದರೂ ಹೇಳಿಕೊಳ್ಳು ವಂತಹ ಹೆಚ್ಚಿನದೇನನ್ನೂ ಮಾಡಲಿಲ್ಲ.

## ಮಹಂತ ರಾಮಕೃಷ್ಣದಾಸ

ಮಹಾವೀರ ದಾಸನ ಉತ್ತರಾಧಿಕಾರಿಯಾಗಿ ಮಹಂತ ರಾಮಕೃಷ್ಣದಾಸನು 1895 ರಲ್ಲಿ ವಿಚಾರಣ ಕರ್ತನಾದನು. ವೆಂಕಟೇಶ್ವರಸ್ವಾಮಿ ಉತ್ಸವಮೂರ್ತಿಗೆ ರತ್ನಗಳ ಶಂಖ ಚಕ್ರಗಳನ್ನೂ, ಉತ್ಸವ ಮೂರ್ತಿಯ ಉಭಯನಾಯಕಿಯರಿಗೆ ಕರ ಕವಚಗಳನ್ನೂ, ಒಡ್ಯಾಣಗಳನ್ನೂ ಮಾಡಿಸಿದನು. ತಿರುಪತಿಯಲ್ಲಿನ ಗೋದಾ ದೇವಿಗೆ ಬಂಗಾರದ ಗೆಜ್ಜೆಗಳನ್ನು ಮಾಡಿಸಿದ.

ಮಹಂತ ರಾಮಕೃಷ್ಣದಾಸನು ಮೂವರು ಶಿಷ್ಯರನ್ನು ಹೊಂದಿದ್ದನು. ಅವರುಗಳೆಂದರೆ ಪ್ರಯಾಗದಾಸ, ರಾಮಲಕ್ಷ್ಮಣದಾಸ, ಮೂಲರಾಮಾನುಜದಾಸ. ಇವರಲ್ಲಿ ಪ್ರಯಾಗ ದಾಸನು 1900ರಲ್ಲಿ ಮಹಂತನಾದನು.

## ಮಹಂತ ಪ್ರಯಾಗದಾಸ

ಮಹಂತ ಪ್ರಯಾಗದಾಸನು ನಿರಾಳಿ ಮಂಟಪವನ್ನು ಪುನರುದ್ಧರಿಸಿದನು. ಅಲ್ಲಿಯೇ ಇದ್ದ ಜೀರ್ಣಶೀರ್ಣವಾದ ಶ್ರೀ ವರಾಹಸ್ವಾಮಿಯ ಆಲಯವನ್ನು ಜೀರ್ಣೋದ್ಧಾರಗೊಳಿಸಿದನು. ಆ ಹಿಂದೆ ತಿರುಮಲೆಯ ಆಲಯದ ಉತ್ತರದ ಕಡೆಯ ಆಯಿನಾ ಮಂಟಪದಲ್ಲಿ ಹನ್ನೆರಡು ವರ್ಷದಿಂದ ಇದ್ದಂತಹ ವರಾಹಸ್ವಾಮಿ ವಿಗ್ರಹವನ್ನು ಪುನರುದ್ಧಾರವಾದ ವರಾಹಸ್ವಾಮಿ ಗುಡಿಯಲ್ಲಿ ಪುನಃ ಪ್ರತಿಷ್ಠಾಪಿಸಿದನು. ಹೊಸದಾದ ಒಂದು ರಥವನ್ನು ಮಾಡಿಸಿದನು. ಹಂಸ ಗರುಡ ವಾಹನಗಳನ್ನು ಚಿನ್ನದ ಗಿಲೀಟು ಮಾಡಿಸಿ, ವೆಂಕಟೇಶ್ವರಸ್ವಾಮಿ ಆಲಯದ ಹಲವು ಮಂಟಪಗಳನ್ನು ಪುನರುದ್ಧರಣಗೊಳಿಸಿ ಸಂಪಂಗಿ ಪ್ರದಕ್ಷಿಣದ ನೆಲಗಟ್ಟನ್ನು ಸರಿಪಡಿಸಿದನು. ಒಂದು ಬೆಳ್ಳಿಯ ತಿರುಚ್ಚಿಯನ್ನು ನಿರ್ಮಿಸಿದನು. ಯಾತ್ರಿಕರ ವಿಶ್ರಾಂತಿಗೆ ಸತ್ರವನ್ನು ನಿರ್ಮಿಸಿದನು. ಒಂದು ಕಿರಿಯ ಬಂಗಾರದ ಲಕ್ಷ್ಮೀದೇವಿಯ ಪ್ರತಿಮೆಯನ್ನು ಮಾಡಿಸಿ ಅದನ್ನು ವೇಂಕಟೇಶ್ವರಸ್ವಾಮಿಯ ಹೃದಯಕ್ಕೆ ಹತ್ತಿರವಾಗಿರುವಂತೆ ಹಾರದಲ್ಲಿ ಸೇರಿಸಿ ಅಲಂಕರಿಸಿದನು. ಬಂಗಾರದ ಶಂಖ ಚಕ್ರಗಳ ಕವಚಗಳನ್ನು ಮಾಡಿಸಿ ವೆಂಕಟೇಶ್ವರನ ಮೇಲೇರಿದ ಕೈಗಳಲ್ಲಿ ತೊಡಿಸಿದನು. ಶ್ರೀರಾಮ, ಸೀತೆ, ಲಕ್ಷ್ಮಣರ ವಿಗ್ರಹಗಳಿಗೆ ಚಿನ್ನದ ಕರಕವಚಗಳನ್ನು ಮಾಡಿಸಿದನು.

ತಿರುಪತಿಯಲ್ಲಿ ಸ್ಥಾವರವಾದ ಗೋವಿಂದರಾಜಸ್ವಾಮಿ ಹಾಗೂ ಉಭಯ ನಾಯಕಿಯರಿಗೆ ಬೆಳ್ಳಿಯ ತಗಡಿನ ಹೊದಿಕೆಯನ್ನು ಏರ್ಪಡಿಸಿದನು. ಸ್ವಾಮಿಯ ಉತ್ಸವ ವಿಗ್ರಹಕ್ಕೆ ಒಂದು ದೊಡ್ಡ ವಜ್ರದ ಪದಕವನ್ನೂ, ಕಿವಿಯೋಲೆಗಳನ್ನು ಮಾಡಿಸಿದನು. ಶೂಡಿಕೊಡುತ್ತ ನಾಚ್ಚಿಯಾರ್‌ಗೆ ಒಂದು ರತ್ನದ ಒಡ್ಯಾಣವನ್ನೂ ಚಿನ್ನದ ಹಾರವನ್ನೂ ಮಾಡಿಸಿದನು.

ತಿರುಪತಿಯ ರಾಮದೇವಳದಲ್ಲಿನ ರಾಮದೇವರ ಬೆಳ್ಳಿಯ ಕವಚವನ್ನು ಈತನು ಜೀರ್ಣೋದ್ಧಾರ ಮಾಡಿಸಿ, ಸೀತೆಗೂ ಲಕ್ಷ್ಮಣಸ್ವಾಮಿಗೂ ಹೊಸ ಕವಚಗಳನ್ನು ಮಾಡಿಸಿದನು. ಉತ್ಸವ ವಿಗ್ರಹಗಳಿಗೆ ಚಿನ್ನದ ಹಸ್ತಗಳನ್ನು, ಪಾದಗಳನ್ನು, ಚಿನ್ನದ ಬಿಲ್ಲು ಬಾಣಗಳನ್ನು ಮಾಡಿಸಿದನು. ಗರ್ಭಗೃಹದ ಪ್ರದಕ್ಷಿಣಾಪಥದಿಂದ ಹೊರಬಾಗಿಲವರೆಗೆ ನೆಲಕ್ಕೆ ಕಲ್ಲಿನ ಹಾಸು ಹೊದಿಸಿದನು.

ತಿರುಚಾನೂರಿನಲ್ಲಿ ಪದ್ಮಾವತೀ ಅಮ್ಮನವರ ಗರ್ಭಗೃಹದ ಮೇಲೆ ಗೋಪುರವನ್ನು ನಿರ್ಮಿಸಿ ಅದರ ಮೇಲೆ ಚಿನ್ನದ ಗಿಲೀಟಿನ ಕಲಶವನ್ನು ಸ್ಥಾಪಿಸಿದನು. ಸುಂದರರಾಜಸ್ವಾಮಿ ವಿಗ್ರಹವನ್ನು ಸ್ಥಾಪಿಸಿ, ಅಮ್ಮನವರಿಗೆ ಚಿನ್ನದ ಕಿರೀಟವನ್ನು ಮಾಡಿಸಿದನು. ಇಲ್ಲಿಯೇ ಇದ್ದಂತಹ ವೆಂಕಟೇಶ್ವರಸ್ವಾಮಿಗೆ ಹೊಸದಾದ ಕರ್ಣಪತ್ರಗಳನ್ನು ಮಾಡಿಸಿದನು. ಆಲಯಗಳ ಒಳ ಹೊರ ಭಾಗಗಳಲ್ಲಿ ಕಲ್ಲಿನ ಹಾಸುಗಳನ್ನು ಹೊದಿಸಿ ನೆಲವನ್ನು ಸಪಾಟು ಮಾಡಿಸಿದನು. ಗಿಲೀಟು ಮಾಡಿದ ತಗಡು ಹೊದಿಸಿದ ಧ್ವಜಸ್ತಂಭವನ್ನು ಸ್ಥಾಪಿಸಿ, ಆಲಯದ ದಕ್ಷಿಣಕ್ಕೆ ಒಂದು ಸತ್ರವನ್ನು ಯಾತ್ರಿಕರಿಗಾಗಿ ನಿರ್ಮಿಸಿದನು. ತೆಪ್ಪೋತ್ಸವವನ್ನು ಆರಂಭಿಸಿದನು.

ಬೆಟ್ಟದ ಬುಡದಲ್ಲಿನ ಕಪಿಲ ತೀರ್ಥದಲ್ಲಿ ಕಪಿಲೇಶ್ವರಸ್ವಾಮಿಯನ್ನು ಪುನಃ ಪ್ರತಿಷ್ಠೆ ಮಾಡಿ ಕುಂಭಾಭಿಷೇಕ ಮಾಡಿಸಿದನು. ಉತ್ಸವ ಮೂರ್ತಿಗಳ ಅಲಂಕಾರಕ್ಕಾಗಿ ಚಿನ್ನದ ಕಿರೀಟ, ಹಸ್ತಕಮಲಗಳು, ಮತ್ತು ಹಲವು ಹೊಸ ಆಭರಣಗಳನ್ನು ಮಾಡಿಸಿದನು. ಶಿವನ ವಾಹನವಾದ ನಂದಿ ಪ್ರತಿಮೆಗೆ ಬೆಳ್ಳಿಯ ಕವಚ ಮಾಡಿಸಿದನು. ಕಪಿಲತೀರ್ಥದಲ್ಲಿ ತೆಪ್ಪೋತ್ಸವವನ್ನು ಆರಂಭಿಸಿದನು.

ತಿರುಪತಿಯಲ್ಲಿ ರೈಲ್ವೆ ನಿಲ್ದಾಣದ ಬಳಿ ಯಾತ್ರಿಕರಿಗಾಗಿ ದೊಡ್ಡದಾದ ಸತ್ರ ನಿರ್ಮಿಸಿದನು. ಈತನು ದೇವಸ್ಥಾನದ ಐದು ಲಕ್ಷ ರೂಪಾಯಿಗಳನ್ನು ಬೊಂಬಾಯಿ ಅಭಿವೃದ್ಧಿ ಸಾಲದಲ್ಲಿ ತೊಡಗಿಸಿ ವಾರ್ಷಿಕ 54,500 ರೂಪಾಯಿ ಬಡ್ಡಿ ಬರುವಂತೆ ಮಾಡಿದನು. ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಉತ್ಸವ ಮೂರ್ತಿಗಳಲ್ಲಿ ಇಬ್ಬರು ನಾಚ್ಚಿಯಾರ್‌ಗಳಲ್ಲಿ ಒಬ್ಬರಿಗೆಂದು ಮದರಾಸಿನ ಪಿ. ಉರ್ ಮತ್ತು ಮಕ್ಕಳು ಕಂಪನಿಯು ತಯಾರಿಸಿದ ಕುಚ್ಚು ತೊಡಿಸಿದ ಜಡೆಯನ್ನು - ಮಾಡಿಸಿದನು. ಇದು ಚಿನ್ನದ ಚೌಕ ಪದಕ ಹಾಗೂ ವಜ್ರಗಳು, ಮಾಣಿಕ್ಯಗಳಿಂದ ಕೂಡಿದ್ದು - ಆಲಯದ ಉಭಯ ನಾಯಕಿಯರಿಗೆ ಬಳಸಲಾಗುತ್ತಿದ್ದಿತು.

ಜನವರಿ - 1931 ರಲ್ಲಿ ಗದ್ವಾಲ ಸಂಸ್ಥಾನದ ರಾಣಿ ಶ್ರೀ ಆದಿಲಕ್ಷ್ಮಿ ದೇವಮ್ಮನವರು ಆಲಯಕ್ಕೆ ಆಗಮಿಸಿ ಸ್ವಾಮಿಯ ಸೇವೆ ಮಾಡಿದರು. ಆಗ ಆಕೆಯು 20,000 ರೂಪಾಯಿ ಬೆಲೆಬಾಳುವ ತಮ್ಮಲ್ಲಿದ್ದ ಹಳೆಯ ಆಭರಣಗಳನ್ನು ಕಾಣಿಕೆಯಾಗಿ ನೀಡುತ್ತ, ಶ್ರೀ ವೆಂಕಟೇಶ್ವರ ಸ್ವಾಮಿಯ ಉತ್ಸವ ವಿಗ್ರಹಕ್ಕೆ ಒಂದು ರತ್ನ ಕಿರೀಟವನ್ನು, ಅವುಗಳನ್ನು ಬಳಸಿ ಮಾಡಬೇಕೆಂದು ವಿಚಾರಣಕರ್ತನನ್ನು ಕೇಳಿದರು.



ಮದರಾಸಿನ ವಜ್ರ ಪಡಿ ವ್ಯಾಪಾರಿಯೋರ್ವರಿಗೆ ಕೆಲಸವನ್ನು ವಹಿಸಿಕೊಡಲಾಯಿತು. ಮದರಾಸಿನ ಗೋವಿಂದಪ್ಪನಾಯಕ ಬೀದಿಯ್ಲಲಿದ್ದಂತಹ ಚಿನಿವಾರರಾದ ಸಿ.ವಿ. ಷಣ್ಮುಖಾಚಾರಿ, ಹಾಗೂ ಮುರುಗೇಶಾಚಾರಿಯವರು ಕೆಲಸವನ್ನುಮಾಡಿಕೊಟ್ಟರು.

ಅವರು ಕಿರೀಟದ ಕೆಲಸವನ್ನು 1931 ರ ಆಗಸ್ಟ್‌ನಲ್ಲಿ ಆರಂಭಿಸಿ ಸೆಪ್ಟೆಂಬರ್ 1932 ರಲ್ಲಿ ಪೂರ್ತಿ ಮಾಡಿದರು. ಪೂರ್ಣಗೊಂಡ ರತ್ನ ಕಿರೀಟವನ್ನು ಮಲೆಯಪ್ಪಸ್ವಾಮಿಗೆ (ಉತ್ಸವ ಮೂರ್ತಿ) 1932 ರ ಅಕ್ಟೋಬರ್ 1 ರಂದು ಅಲಂಕರಿಸಲಾಯಿತು. ಆ ವರ್ಷದ ಬ್ರಹ್ಮೋತ್ಸವದ ಮೊದಲನೆಯ ದಿನವು ಇದಾಗಿದ್ದಿತು. ರತ್ನಗಳಲ್ಲಿನ ನಾಲ್ಕು ಬಗೆಯವುಗಳಾದ - ಮಾಣಿಕ್ಯ, ಕೆಂಪು, ಹವಳ, ವಜ್ರಗಳನ್ನುಇಲ್ಲಿಬಳಸಲಾಯಿತು. ಕಿರೀಟದಲ್ಲಿ ಹುದುಗಿಸಲಾದ ರತ್ನಗಳೆಂದರೆ - 681 ವಜ್ರಗಳು, 669 ಮಾಣಿಕ್ಯಗಳು, 125 ಪಚ್ಚೆ, 84 ಇಂದ್ರನೀಲಮಣಿಗಳು - ಒಟ್ಟು 1559 ಅಮೂಲ್ಯವಾದ ಕಲ್ಲುಗಳು. ಕಿರೀಟವು ಮೇಲಿನಿಂದ ಕೆಳಗಿನವರೆಗೆ 7.75 ಇಂಚುಗಳಿದ್ದು ಬುಡದಲ್ಲಿ 3.025 ಇಂಚಿನ ವ್ಯಾಸವನ್ನು ಹೊಂದಿದೆ.

ಈ ಕಡೆಯ ವಿಚಾರಣಕರ್ತನು ಮೂಲಮೂರ್ತಿಗೆ ಒಂದು ನಾಲ್ಕು ರೀತಿಯ ರತ್ನಗಳ ಕಿರೀಟವನ್ನು ಮಾಡಿಸಬೇಕೆಂದು ಯೋಚಿಸಿ, ಅದಕ್ಕಾಗಿ ಒಂದು ಕರಡು ನಕ್ಷೆಯನ್ನೂ ಅಂದಾಜು ಪಟ್ಟಿಯನ್ನೂ ತಯಾರಿಸಿದನು. ಅದಕ್ಕಾಗಿ ಆಯ್ಕೆ ಮಾಡಿದ ವಜ್ರಗಳನ್ನೂ, ಮಾಣಿಕ್ಯ, ಮರಕತ, ನೀಲಮಣಿಗಳನ್ನು ಕೊಂಡುಕೊಂಡ. ಇವುಗಳಲ್ಲಿ ಎರಡು ದೊಡ್ಡ ವಜ್ರಗಳು - ಒಂದು 11 ಕ್ಯಾರೆಟ್‌ನದೂ, ಇನ್ನೊಂದು 17 ಕ್ಯಾರೆಟ್ಟಿನದೂ - ಇದ್ದವು. ದೇವಸ್ಥಾನದ ಖಜಾನೆಯಲ್ಲಿದ್ದ ಶ್ರೀಕೃಷ್ಣದೇವರಾಯನು ತನ್ನ ಇಬ್ಬರು ರಾಣಿಯರೊಡನೆ ತಿರುಮಲೆಗೆ 1503-2-10 ರಂದು ಬಂದಾಗ ವೆಂಕಟೇಶ್ವರಸ್ವಾಮಿಗೆ ನೀಡಿದ್ದು ಎನ್ನಲಾದಂತಹ ಹಳೆಯ ಚಿನ್ನದ ಕಿರೀಟವನ್ನು ಹೊರತೆಗೆಸಿದ. ಅದರ ಮೇಲೆ ವಜ್ರಗಳನ್ನು ಹುದುಗಿಸುವ ಕೆಲಸವನ್ನು ಆರಂಭಮಾಡಿದನು. ಚಿನಿವಾರರು ಹಳೆಯ ಕಿರೀಟವನ್ನು ಹೊಸ ಚಿನ್ನದೊಡನೆ ಕರಗಿಸಿ ಕಿರೀಟದ ಒಂದು ಆಕಾರವನ್ನು ತಯಾರಿಸಿ, ಹಲವು ರತ್ನಗಳನ್ನು ಹುದುಗಿಸಿದ ಪಟ್ಟಿಗಳನ್ನು ಅದಕ್ಕೆ ಬೆಸುಗೆ ಹಾಕುವಷ್ಟರಲ್ಲಿ ಯಾಕೋ ಏನೋ ಕೆಲಸವನ್ನು ನಿಲ್ಲಿಸಲಾಯಿತು. ಇಡೀ ಚಿನ್ನದ ಆಕಾರ, ವಜ್ರಗಳು ಮೊದಲಾದ ಎಲ್ಲ ಮೂಲವಸ್ತುಗಳನ್ನು ಆಗಿದ್ದ ಕೆಲಸದ ಭಾಗಗಳನ್ನೂ ಆಲಯದ ಖಜಾನೆಗೆ ಹಿಂದಿರುಗಿಸಲಾಯಿತು.

(ಮುಂದುವರೆಯುವುದು.)

---



ಯಾತ್ರಿಕ ಭಕ್ತರಲ್ಲಿ.....

ವಿನಂತಿ

''ಡಯಲ್ - ಯುವರ್ ಇ.ಓ.''



ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

*ದೂರವಾಣಿ ಸಂಖ್ಯೆ - 08574-77261.*

ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು
ತಮ್ಮ ಸುಲಭತರ ಯಾತ್ರೆ ಕೈಗೂಡಲು
ದಯವಿಟ್ಟು ಮಾತನಾಡಿ.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲ

# ವಾರ್ಷಿಕ ಬ್ರಹ್ಮೋತ್ಸವಗಳು



## 19-9-2001 ರಿಂದ 28-9-2001

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 19-9-2001 | ಬುಧವಾರ | -- | ಸೇನಾಪತಿ ಉತ್ಸವ, ಅಂಕುರಾರ್ಪಣೆ. |
| 20-9-2001 | ಗುರುವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 21-9-2001 | ಶುಕ್ರವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 22-9-2001 | ಶನಿವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 23-9-2001 | ಭಾನುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 24-9-2001 | ಸೋಮವಾರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | **ಗರುಡವಾಹನ.** |
| 25-9-2001 | ಮಂಗಳವಾರ | ಹನುಮಂತವಾಹನ | |
| | | ಸಂಜೆ - ವಸಂತೋತ್ಸವ | ಗಜವಾಹನ. |
| 26-9-2001 | ಬುಧವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 27-9-2001 | ಗುರುವಾರ | **ರಥೋತ್ಸವ** | ಅಶ್ವವಾಹನ. |
| 28-9-2001 | ಶುಕ್ರವಾರ | ಚಕ್ರಸ್ನಾನ. | ಧ್ವಜಾವರೋಹಣ. |

**ಸೂಚನೆ :** ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಭಕ್ತರ ಸೌಲಭ್ಯಕ್ಕಾಗಿ ಪ್ರಕಟನ ಶಾಖೆಯ ಪುಸ್ತಕದಂಗಡಿ ಏರ್ಪಾಡು ಆಗಿರುವುದು. ಭಕ್ತರು ಬ್ರಹ್ಮೋತ್ಸವದಲ್ಲಿ ಆರ್ಜಿತ ಶುಲ್ಕ ನೀಡಿಯೂ ಭಾಗವಹಿಸಬಹುದು. ತಮ್ಮ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

**ನೀವೂ ಬನ್ನಿ.** **ನಿಮ್ಮವರನ್ನೂ ಕರೆತನ್ನಿ.**



# ಜನಪ್ರಿಯವಾಗುತ್ತಿರುವ ಶ್ರೀವಾರಿ ಸೇವೆ

- ಒಂದು ಸಮೀಕ್ಷೆ.



ತಿರುಮಲೆ ತಿರುಪತಿಗಳಲ್ಲಿ ತಿ.ತಿ.ದೇ. ಆರಂಭಿಸಿರುವ ಶ್ರೀವಾರಿ ಸೇವೆ ದಿನೇ ದಿನೇ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತ ನಡೆದಿದೆ. ಪ್ರತಿದಿನವೂ ಇಪ್ಪತ್ತೈದರಿಂದ ಐವತ್ತು ಸಾವಿರ ಮಂದಿ ತಿರುಮಲೆಯ ಸ್ವಾಮಿಯನ್ನು ದರ್ಶಿಸಿ, ಅರ್ಚಿಸಿ, ನಮಿಸಿ, ತೃಪ್ತಿಪಡೆಯಲು ಬರುತ್ತಾರೆ. ಹಬ್ಬ ಹರಿದಿನ ಉತ್ಸವ ದಿನಗಳಲ್ಲಿ ಈ ಸಂಖ್ಯೆ ಲಕ್ಷವನ್ನು ಸಮೀಪಿಸುವುದೂ, ದಾಟುವುದೂ ಸಾಮಾನ್ಯ. ಇಂತಹ ಅಗಾಧವಾದ ಯಾತ್ರಿಕಸಾಂದ್ರತೆಯ ಕನಿಷ್ಠ ಅಗತ್ಯಗಳನ್ನು ಪೂರೈಸಲು ತಿ.ತಿ.ದೇ. ಹಲವು ಹನ್ನೊಂದು ರಂಗಗಳಲ್ಲಿ ಸತತವಾಗಿ ಕೃಷಿ ತತ್ಪರವಾಗಿದೆ. ಇಂತಲ್ಲಿ ಯಾತ್ರಿಕರ ಸ್ವಯಂಪ್ರೇರಿತ ಸೇವೆಯನ್ನು ಪ್ರೋತ್ಸಾಹಿಸಿ ಅವರಲ್ಲಿ ಸಹಜೀವನದ, ಸೌಧರ್ಮ್ಯದ ಭಾವನೆಗಳನ್ನು ಪ್ರೇರಿಸಲು ಉಂಟಾದದ್ದೇ ಶ್ರೀವಾರಿ ಸೇವೆ. 'ಮಾನವ ಸೇವೆಯೇ ಮಾಧವಸೇವೆ' ಎಂಬುದೂ, ಭಾಗವತ ಸೇವೆಯೇ ಭಗವಂತನ ಸೇವೆ ಎಂಬುದೂ ಇಲ್ಲಿನ ಮೂಲಸೂತ್ರ.

ಭಾಗವತ ಸೇವೆಯ ತತ್ತ್ವ ಭಾರತೀಯ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಒಂದು ಹೆಸರಾದ ಮೌಲ್ಯವೇ ಆಗಿ ತಿರುಮಲೆಯಲ್ಲಿಯೇ ರಾಮಾನುಜರೂ, ಅನಂತಾಳ್ವಾರರೂ ನಡೆದು ತೋರಿಸಿದ, ಆ ಮೂಲಕ ತಿರುಮಲೆಯ ಯಾತ್ರಿಕರ ಮೇಲಣ ಸಾಮಾನ್ಯ ಅಗತ್ಯ ಪೂರೈಕೆಗಳ ಒತ್ತಡವನ್ನು ಕಡಿಮೆಗೊಳಿಸುವ, ಉದ್ದೇಶದಿಂದ ಆರಂಭ ವಾಗಿರುವ ಶ್ರೀವಾರಿ ಸೇವೆ ಹೆಚ್ಚು ಹೆಚ್ಚು ಮಂದಿಯನ್ನು ಆಕರ್ಷಿಸುತ್ತ ನಡೆದಿದೆ - ಎಂದು ವರದಿ ಮಾಡಲು ಸಂತಸವಾಗುತ್ತದೆ.

ಮೇ ತಿಂಗಳಿನಲ್ಲಿ ಒಟ್ಟು 2355 ಮಂದಿ ಶ್ರೀವಾರಿ ಸೇವೆಯಲ್ಲಿ ಭಾಗವಹಿಸಿ ಯಾತ್ರಿಕ ಸೇವೆಯನ್ನು ಆ ಮೂಲಕ ಯದುಕುಲ ತಿಲಕನ ಸೇವೆಯನ್ನು ಸಲ್ಲಿಸಿದ್ದಾರೆ. ಇವರಲ್ಲಿ ಸುಮಾರು ಆರು ನೂರು ಮಂದಿ ಮಹಿಳೆಯರು ಸಾವಿರದ ಏಳುನೂರು ಮಂದಿ ಪುರುಷರು. ಇವರುಗಳು ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್, ವೈಕುಂಠಂ ಸರದಿಯ ಸಾಲಿನ ಸಮುದಾಯ ಭವನ, ಯಾತ್ರಿಕ ವಿಶ್ರಾಂತಿ ಭವನ, ಕಲ್ಯಾಣ ಕಟ್ಟೆ, ಮೊದಲಾದ ಕಡೆಗಳಲ್ಲಿ ತಮಗೆ ನೀಡಲಾದ ಭವನದಲ್ಲಿ ತರಕಾರಿ ಹೆಚ್ಚುವುದರಿಂದ, ಮಾಡಿದ ಅಡುಗೆಯನ್ನು ಬಡಿಸುವವರೆಗೆ ಎಲ್ಲ ರೀತಿಯ ಕೆಲಸ ಗಳನ್ನೂ ಉತ್ಸಾಹದಿಂದ ನಡೆಸಿದರು. ಯಾತ್ರಿಕರಿಗೆ ಬೇಕಾದ ವಿವಿಧ ಮಾಹಿತಿಯನ್ನು ನೀಡುವಿಕೆಯ ಕೆಲಸವನ್ನೂ, ಕರಪತ್ರ ವಿತರಣೆ, ಮಾರ್ಗದರ್ಶನದ ಕೆಲಸಗಳನ್ನು ಕೈಗೊಂಡಿದ್ದರು.

ಮೇ ತಿಂಗಳಿನ ಶ್ರೀವಾರಿ ಸೇವೆಯ ಪರಿಣಾಮ ಪರಿಮಾಣಗಳು - ಗುಣಗಾತ್ರಗಳು ದಿನೇ ದಿನೇ ಹೆಚ್ಚುತ್ತಿರುವುದನ್ನು ಜೂನ್ ತಿಂಗಳಿನ ಮಧ್ಯಭಾಗದಲ್ಲಿ ಶ್ರೀವಾರಿ ಸೇವೆಯನ್ನು ಪರಿಶೀಲಿಸಿದಾಗ ಕಂಡುಕೊಳ್ಳಲಾಯಿತು. ಈ ಪರಿಶೀಲನೆಯಲ್ಲಿ ಕಂಡುಬಂದ ಹಲವು ಅಂಶಗಳನ್ನು ಇಲ್ಲಿ ಬೆಳಕಿಗೆ ಒಡ್ಡಲಾಗಿದೆ.





ರಾಜಮಹೇಂದ್ರವರದ ಸತ್ಯಸಾಯಿ ಭಜನ ಮಂಡಳಿಯ ಮೂವತ್ತಾರು ಮಂದಿ ಒಂದು ವಾರದ ಸೇವೆಯಲ್ಲಿ ಸೇರಿದ್ದರು. ಒಂದು ತಂಡ ಅಡುಗೆ ಮನೆಯಲ್ಲಿ ಹರಿನಾಮ ಸಂಕೀರ್ತನೆ ಮಾಡುತ್ತ ತರಕಾರಿ ಹಚ್ಚುತ್ತಿದ್ದರು. ಅವರೆಲ್ಲ ಮಹಿಳೆಯರು. ಒಬ್ಬ ಮಧ್ಯವಯಸ್ಕ ತಾಯಿ ಹೇಳಿದ ಮಾತು ''ಸೇವೆ ಮಾಡುವುದು ತೃಪ್ತಿಕರವಾಗಿದೆ. ಅವಕಾಶ ಸಿಕ್ಕಿದರೆ ಪುನಃ ಬಂದು ಸೇವೆ ಮಾಡುತ್ತೇನೆ.''

ಪುನಃ ಬರುವ ಬಗ್ಗೆ - ಬಂದು ಸೇವೆ ಮಾಡುವ ಬಗ್ಗೆ ಅದೇ ತಂಡದ ಅಧ್ಯಕ್ಷ ಡಾ॥ ಜಿ. ಭಾಸ್ಕರಾಚಾರಿ, ಸಂಚಾಲಕ ಶ್ರೀ ಗುನ್ನೇಶ್ವರರಾವ್ ಅವರು ಏನು ಹೇಳುವರು ಎಂಬುದು ಪ್ರಶ್ನೆಯಾಯಿತು. ಭಾನುವಾರದಿಂದ ಶನಿವಾರದವರೆಗೆ ಒಂದು ವಾರದ ಸೇವೆಗೆ ಅವರಲ್ಲಿನ ಹಲವು ಮಂದಿ ತಮ್ಮ ಸರ್ಕಾರಿ ಕೆಲಸಗಳಿಂದ ಬಿಡುವು ಪಡೆದು ಬಂದಿದ್ದವರು. ಒಂದರ್ಧಡಜನ್ ಮಂದಿ ಸಾಮಾನ್ಯರಜೆ ಹಾಕಿ ಬಂದವರು. ಶಾಲಾ ಮುಖ್ಯೋಪಾಧ್ಯಾಯ ಶ್ರೀ ಡಿ. ಎ. ಪಟ್ನಾಯಿಕ್ ಹೇಳುವಂತೆ - ಆತ್ಮತೃಪ್ತಿಗಾ ಉಂದಿ - ಆತ್ಮ ತೃಪ್ತಿಯಾಗಿದೆ. 'ದಸರಾ ರಜೆಯಲ್ಲಿ ಬೇಸಿಗೆ ರಜೆಯಲ್ಲಿ ಬಂದು ಸೇವೆ ಮಾಡುವುದು ಅಂತ



ನಿರ್ಧಾರ ಮಾಡಿದ್ದೇವೆ' ಎಂದರು ಸಂಘದ ಅಧ್ಯಕ್ಷ ಡಾ॥ ಭಾಸ್ಕರಾಚಾರಿ .

ತಿರುಪತಿಯ ಎಸ್.ವಿ. ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮ ಶಿಕ್ಷಣದ ವಿದ್ಯಾರ್ಥಿಗಳು ಸರ್ವಶ್ರೀ ವೆಂಕಟೇಶ್ವರರಾವ್, ಧನಂಜಯನಾಯುಡು -ಮೊದಲಾದ ಐದುಮಂದಿ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರ ಅಗತ್ಯಗಳನ್ನು ವಿಚಾರಿಸುತ್ತ ಅವರನ್ನು ಗೈಡ್ ಮಾಡುತ್ತನಡೆದಿದ್ದರು. ''ಮುಂದಿನ ತಿಂಗಳು ಮತ್ತೆ ಬಂದು ಸೇವೆಯಲ್ಲಿ ಭಾಗವಹಿಸುವೆವು. ಇಲ್ಲಿ ನಮಗೆ ಮತ್ತೂ ಒಳ್ಳೆಯ ಶಿಕ್ಷಣ ದೊರೆಯುತ್ತಿದೆ'' ಎಂದು ತಿಳಿಸಿದರು.

ಚೆನ್ನೈಯಿಂದ ಬಂದ ನಾಲ್ಕು ಮಂದಿ ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಪುಳಿಯೋಗರೆ ಪೊಟ್ಟಣಗಳ ಉಚಿತ ವಿತರಣೆಯಲ್ಲಿ ತೊಡಗಿದ್ದರು. ಅವರಿಗೆ ಚೆನ್ನೈ ದೇವಾಲಯದ ನೋಟೀಸ್ ಬೋರ್ಡ್‌ನಲ್ಲಿ ನೋಡಿದ್ದರಿಂದ ಸೇವೆಯ ಬುದ್ಧಿ ಹುಟ್ಟಿತಂತೆ. ಚೆನ್ನೈ ವಿಚಾರಣಾಕೇಂದ್ರದ ಮೂಲಕವಾಗಿ ಸೇವೆಗೆ ಬಂದು ವಾರದ ಸೇವೆಯಲ್ಲಿ ಪಾಲುಗೊಂಡವರು. ವರ್ಷಕ್ಕೆ ಒಮ್ಮೆಯಾದರೂ ಬಂದು ಇಲ್ಲಿ ಕನಿಷ್ಠ ಒಂದು ವಾರದ ಸ್ವಾಮಿಸೇವೆ ಮಾಡುವುದು ಸಧ್ಯದ ಉದ್ದೇಶ. ''ಇದರಿಂದ ಜನಕ್ಕೆ ನೆರವು ನೀಡಿದ ತೃಪ್ತಿಯ ಜೊತೆಗೆ ದೇವರು ಒಪ್ಪುವ ಕೆಲಸ ಮಾಡಿದಂತೆ ಆಗುತ್ತದೆ.''

ಶ್ರೀವಾರಿ ಸೇವೆಯನ್ನು ಜಾತಿ ಮತ ಪಂಥ ಸ್ತ್ರೀಪುರುಷ ವೃದ್ಧ ತರುಣ ಕನ್ನಡ ತೆಲುಗು ತಮಿಳು ಭೇದಗಳಿಲ್ಲದೆ ಯಾರು ಬೇಕಾದರೂ ಮಾಡಬಹುದಾಗಿದೆ. ಸೇವೆ ಸಲ್ಲಿಸಬೇಕು ಎಂಬ ಅಪೇಕ್ಷೆಯೇ ಇಲ್ಲಿನ ಅರ್ಹತೆ, ಅಧಿಕಾರ. ತಿರುಮಲೆಯ ಅನ್ನದಾನ ಭವನದಲ್ಲಿನ ಶ್ರೀವಾರಿಸೇವೆ ಕಚೇರಿಯಲ್ಲಿ ಬೆಳಗ್ಗೆ 10-30 ರಿಂದ ಸಂಜೆ 5 ಗಂಟೆಯ ಒಳಗಾಗಿ ತಮ್ಮ ಹೆಸರನ್ನು ನೊಂದಾಯಿಸಿಕೊಂಡು ನಾಲ್ಕು ಗಂಟೆಗಳ ಒಂದು ಅವಧಿಯ ಸೇವಾವಕಾಶ ಪಡೆಯಬಹುದು. ಐದು ಹತ್ತು ಮಂದಿ ಒಟ್ಟಿಗೆ ಒಂದು ಗುಂಪಾಗಿ ಸೇವೆಗೆಂದು ತಿರುಮಲೆಗೆ ಬರುವಂತಿದ್ದರೆ ಮೊದಲೇ ಪೌರಸಂಬಂಧಾಧಿಕಾರಿ ತಿ.ತಿ.ದೇ. ತಿರುಪತಿ - ಇವರಿಗೆ ತಿಳಿಸಿದಲ್ಲಿ ಊಟ ವಸತಿಗಳ ಏರ್ಪಾಡುಗಳನ್ನು ಉಚಿತವಾಗಿ ಮಾಡಲಾಗುವುದು.

**ಭಕ್ತರಿಗಾಗಿ ಭಕ್ತರು ಭಕ್ತಿಯಿಂದ**
**ಮಾಡುವ ಸೇವೆಯೇ ಶ್ರೀವಾರಿಸೇವೆ.**
**ಅದುವೆ ಶ್ರೀ ಹರಿಸೇವೆ ಅದೆ ಸ್ವಾಮಿಸೇವೆ**
**ಅದೇ ಸ್ವಾಮಿ ಮೆಚ್ಚುವ ಸೇವೆ.**

**- ಬಿ. ಎನ್. ಎಸ್.**

# ವಾರ್ತಾ ಲಹರಿ

## ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ದಿನಾಂಕ 27-5-2001 ರಿಂದ 5-6-2001 ರ ವರೆಗೆ ಯಶಸ್ವಿಯಾಗಿ ಬ್ರಹ್ಮೋತ್ಸವಗಳು ನಡೆದವು.

27-6-2001 ರಂದು ಸೇನಾಪತಿ ಉತ್ಸವ ಸಂಪನ್ನವಾಗಿ 28-5-2001 ರಂದು ಪೂರ್ವಾಹ್ನ ಧ್ವಜಾರೋಹಣ ನಡೆಯಿತು. ಅಂದು ಸಂಜೆ ಸ್ವಾಮಿಯು ಉಭಯ ನಾಯಕಿಯರ ಸಹಿತವಾಗಿ ಪುರವೀಧಿಗಳಲ್ಲಿ ದೊಡ್ಡಶೇಷ ವಾಹನದಲ್ಲಿ ಮೆರವಣಿಗೆ ಬಂದರು.

ಪ್ರತಿದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿವಿಧ ವಾಹನೋತ್ಸವಗಳು ಪುರಜನರನ್ನು, ಯಾತ್ರಿಕ ಭಕ್ತರನ್ನು ರಂಜಿಸಿದವು. 1-6-2001 ರಂದು ಸಂಜೆ - ರಾತ್ರಿ ಗರುಡೋತ್ಸವ ವಿಶೇಷವಾಗಿ ಜನರನ್ನು ಆಕರ್ಷಿಸಿ ನಯನಾನಂದಕರವಾಗಿ ನಡೆಯಿತು. 4-6-2001 ರಂದು ರಥೋತ್ಸವ ಸಂಪನ್ನವಾಯಿತು. 5-6-2001 ರಂದು ಚಕ್ರಸ್ನಾನವಾದ ನಂತರ ಅಂದು ಸಂಜೆ ಧ್ವಜಾವರೋಹಣವಾಗಿ ಬ್ರಹ್ಮೋತ್ಸವಗಳು ಪೂರ್ಣವಾದವು.

ಬ್ರಹ್ಮೋತ್ಸವದ ದಿನಗಳಲ್ಲಿ ಸ್ವಾಮಿಯನ್ನು ಉಭಯನಾಯಕಿಯರ ಜೊತೆಗೂಡಿಸಿ ವೇದ ಮಂತ್ರಗಳ, ದಾಸ ಕೀರ್ತನೆಗಳ - ಲಯಕ್ಕೆ ಅನುಸಾರವಾಗಿ ಉಯ್ಯಾಲೆಯಲ್ಲಿ ಆಸೀನ ಗೊಳಿಸಿ ತೂಗಲಾಯಿತು. ಈ ಒಂದು ಪವಿತ್ರವಾದ ಓಲಗದಲ್ಲಿ ಹರಿಕಥೆ ಸಂಗೀತ ಸೇವೆಗಳನ್ನು ಸನ್ನಿಧಿಗೆ ಸಮರ್ಪಿಸಲಾಯಿತು. ಅಸಂಖ್ಯಾತ ಭಕ್ತರು ದಿನವೂ ಸಂಜೆಗಳಲ್ಲಿ ಸ್ವಾಮಿಯ ಓಲಗದಲ್ಲಿ ಸೇರಿ ಸಂತೃಪ್ತರಾದರು.

## ತಿರುಚಾನೂರಿನಲ್ಲಿ ತೆಪ್ಪೋತ್ಸವ

ತಿರುಚಾನೂರಿನ ಪದ್ಮಸರೋವರದಲ್ಲಿ ಪ್ರತಿವರ್ಷವೂ ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ ನಡೆಯುತ್ತದೆ. ಐದು ದಿನಗಳ ಈ ತೆಪ್ಪೋತ್ಸವದಲ್ಲಿ ಮೊದಲೆರಡು ದಿನಗಳು ಆಲಯದ ಒಳಗಿರುವ ಶ್ರೀಕೃಷ್ಣ, ಶ್ರೀಸುಂದರ ರಾಜಸ್ವಾಮಿಗಳ ತೆಪ್ಪೋತ್ಸವವಾಗಿ ನಂತರದ ಮೂರು ದಿನಗಳು ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವವಾಗುತ್ತದೆ.

ಈ ಬಾರಿಯ ತೆಪ್ಪೋತ್ಸವಗಳು 1-6-2001 ರಿಂದ 5-6-2001 ವರೆಗೆ ನಡೆದವು. ಜ್ಯೇಷ್ಠ ಮಾಸದ ಪೂರ್ಣಿಮೆಯಂದು ರಾತ್ರಿ ಶ್ರೀ ಪದ್ಮಾವತೀ ಅಮ್ಮನವರನ್ನು ಮೆರವಣಿಗೆಯಲ್ಲಿ ಕರೆತಂದು ತೆಪ್ಪೋತ್ಸವ ಮಾಡಲಾಯಿತು. ಜೂನ್ ತಿಂಗಳ ನಾಲ್ಕು ಐದನೆಯ ತಾರೀಖುಗಳಲ್ಲಿಯೂ ಅಮ್ಮನವರೇ ತೆಪ್ಪದಲ್ಲಿ ವಿಹರಿಸಿದರು. ಅಪಾರವಾದ ಜನಸಂದಣಿ ತೆಪ್ಪೋತ್ಸವವನ್ನು ಕಂಡು ಆನಂದ ಪಟ್ಟರು.



**ಅಪಿ ನಿಖಿಲ ಲೋಕ ಸುಚರಿತ ಮುಷ್ಟಿಂ**
**ಧಯದುರಿತ ಮೂರ್ಛನಾಜುಷ್ಟಂ**
**ಸಂಜೀವಯತು ದಯೇ ಮಾಂ**
**ಅಂಜನ ಗಿರಿನಾಥ ರಂಜನೀ ಭವತೀ**

- ಅಂಜನಾದ್ರಿಯ ಸ್ವಾಮಿ ವೆಂಕಟೇಶ್ವರ ನನ್ನು ರಂಜಿಸುವ ದಯಾದೇವಿಯೇ, ಎಲ್ಲ ಲೋಕಗಳ ಎಲ್ಲ ಪುಣ್ಯವಂತರ ಪಾವನತೆಯನ್ನೂ ನಾಶಮಾಡುವಷ್ಟು ಪಾಪದಿಂದ ಕೂಡಿ ಮೂರ್ಛಿತನಾದ - ನನ್ನನ್ನು ಬದುಕಿಸು.

**- ವೇದಾಂತದೇಶಿಕರ**
**ದಯಾಶತಕ 12**



**ಕೃಪಣಜನ ಕಲ್ಪಲತಿಕಾಂ**
**ಕೃತಾಪರಾಧಸ್ಯ ನಿಷ್ಕೃಯಾಮಾದ್ಯಾಮ್**
**ವೃಷಗಿರಿನಾಥದಯೇ ತ್ವಾಂ**
**ವಿದಂತಿ ಸಂಸಾರ ತಾರಿಣೀ ವಿಬುಧಾಃ**

-ದೀನರಾದವರಿಗೆ ಸರ್ವವನ್ನೂ ಕೊಡುವ ಕಲ್ಪಲತೆಯಾಗಿ, ತಪ್ಪುಮಾಡಿದ ವರಿಗೆ ಮುಖ್ಯ ಪ್ರಾಯಶ್ಚಿತ್ತವಾಗಿಯೂ ಇರುವ ವೃಷಾದ್ರಿಪತಿಯ ದಯೆಯೇ - ನಿನ್ನನ್ನು ವಿದ್ವಾಂಸರು ಸಂಸಾರದ ದಡಸೇರಿಸುವವಳೆಂದು ತಿಳಿಯುತ್ತಾರೆ.

**- ವೇದಾಂತದೇಶಿಕರ**
**ದಯಾಶತಕ 14**




ತಿರುಪತಿಯಲ್ಲಿ ಬೇಸಿಗೆಯ ಯೋಗ ಶಿಕ್ಷಣ ಶಿಬಿರ ಒಂದು ತಿಂಗಳ ಕಾಲ ನಡೆದು ಯಶಸ್ವಿಯಾಯಿತು. ಸಮಾರೋಪ ಸಮಾರಂಭ 31-5-2001 ರಂದು ನಡೆಯಿತು. ಶಿಬಿರದ ಪ್ರಾಯೋಜನೆ ಸ್ವಿಮ್ಸ್ ವಾಕರ್ಸ್ ಕ್ಲಬ್‌ನವರಿಂದ ಆಗಿತ್ತು. ಚಿತ್ರದಲ್ಲಿ ಕ್ಲಬ್‌ನ ಅಧ್ಯಕ್ಷ ಶ್ರೀ ಸೀತಾರಾಮಯ್ಯ, ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ನಾರಾಯಣ, ಯೋಗ ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲ ಶ್ರೀ ರಾಮಕೃಷ್ಣಾರೆಡ್ಡಿ ಅವರನ್ನು ನೋಡಬಹುದು.

## ವೈಭವದ ಕಾರ್ವೇಟಿನಗರ ಬ್ರಹ್ಮೋತ್ಸವ

ಕಾರ್ವೇಟಿನಗರದಲ್ಲಿರುವ ಶ್ರೀ ವೇಣು ಗೋಪಾಲಸ್ವಾಮಿ ಆಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು 15-5-2001 ರಿಂದ 24-5-2001 ರ ವರೆಗೆ ಯಶಸ್ವಿಯಾಗಿ ನಡೆದವು. ಚಿತ್ತೂರು ಪುತ್ತೂರುಗಳ ಮಧ್ಯದಲ್ಲಿರುವ ಕಾರ್ವೇಟಿನಗರ ಇತಿಹಾಸ ಪುರಾಣ ಪ್ರಸಿದ್ಧವಾಗಿದ್ದು. ಇಲ್ಲಿನ ವೇಣು ಗೋಪಾಲಸ್ವಾಮಿ - ಕವಿ, ಗಾಯಕ, ವೈಣಿಕ ವೈಯಾಕರಣರಿಂದ ಹೊಗಳಲ್ಪಟ್ಟು ಖ್ಯಾತನಾಗಿದ್ದಾನೆ. ಸ್ವಾಮಿಯನ್ನು ಕೀರ್ತಿಸುವ ಸಾರಂಗಪಾಣಿಯ ಪದಗಳು ತೆಲುಗಿನಲ್ಲಿ ಪ್ರಸಿದ್ಧವಾದವು. ತಿ.ತಿ.ದೇ.ಗಳ ಆಡಳಿತ ಪರಿಧಿಯಲ್ಲಿರುವ ಈ ದೇವಾಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ಈ ಬಾರಿ ಮೇ ಹದಿನಾರರಂದು ಧ್ವಜಾರೋಹಣದಿಂದ ಆರಂಭವಾದವು.

ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿವಿಧ ವಾಹನಗಳ ಮೇಲೆ ಸ್ವಾಮಿಯನ್ನು ಬೀದಿ ಮೆರವಣಿಗೆಯಲ್ಲಿ ಕರೆದುಕೊಂಡು ಬಂದು ಸಾರ್ವಜನಿಕರ ಭಕ್ತಿನಮನಗಳಿಗೆ ಆಶ್ರಯವನ್ನು ತೋರಿಸಲಾಯಿತು. 20-5-2001 ರಂದು ಗರುಡ ವಾಹನದಲ್ಲಿ ಶ್ರೀ ವೇಣುಗೋಪಾಲ ಸ್ವಾಮಿ ಬಂದಾಗ ಜನ ಅತಿ ಹೆಚ್ಚಿಗೆ ಸೇರಿ ಸ್ವಾಮಿಯನ್ನು ಸ್ವಾಗತಿಸಿದರು. 23-5-2001 ರಂದು ಬುಧವಾರದಂದು ಬೆಳಗ್ಗೆ ವೈಭವದಿಂದ ರಥೋತ್ಸವ ನಡೆಯಿತು. ಸುತ್ತ ಮುತ್ತಲ ಗ್ರಾಮಗಳ ಭಕ್ತರೂ ಸಹ ಸೇರಿ, ಸ್ವಾಮಿಯ ರಥವನ್ನು ಎಳೆಯುವ ಭಾರವನ್ನು ಹಂಚಿಕೊಂಡರು. 24 ರಂದು ಮಧ್ಯಾಹ್ನ ಚಕ್ರಸ್ನಾನದಿಂದ ಬ್ರಹ್ಮೋತ್ಸವಗಳು ಮುಕ್ತಾಯ ಹೊಂದಿದವು.

ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಅಸಂಖ್ಯಾತ ಭಕ್ತರು ತಿರುಪತಿ - ಮದರಾಸು, ಚಿತ್ತೂರು, ವೇಲೂರು - ಭಾಗಗಳಿಂದ ಆಗಮಿಸಿದ್ದು ಸ್ವಾಮಿಯ ಬ್ರಹ್ಮೋತ್ಸವಗಳಲ್ಲಿ ಉತ್ಸಾಹದಿಂದ ಪಾಲುಗೊಂಡಿದ್ದು ಕಂಡು ಬಂದಿತು.

## ನಾರಾಯಣವನಂ ಬ್ರಹ್ಮೋತ್ಸವ

ತಿರುಪತಿಯ ಬಳಿಯ ಪುತ್ತೂರಿನ ಸಮೀಪದ ನಾರಾಯಣವನದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯವಿದೆ. ಈ ಸ್ಥಳ ಆಕಾಶರಾಜನ ರಾಜಧಾನಿಯಾಗಿ ಪುರಾಣ ಪ್ರಸಿದ್ಧ. ಶ್ರೀನಿವಾಸನ ಮದುವೆ ನಡೆದದ್ದು ಇಲ್ಲಿಯೇ ಎಂಬುದು ಪುರಾಣವಾಕ್ಕು. ಇಲ್ಲಿ ವಾರ್ಷಿಕ ಬ್ರಹ್ಮೋತ್ಸವ 1-6-2001 ರಿಂದ 10-6-2001 ರ ವರೆಗೆ ಯಶಸ್ವಿಯಾಗಿ ನಡೆದವು.

1-6-2001 ರಂದು ಸ್ವಾಮಿಯ ಸೇನಾಧಿಪತಿ ವಿಷ್ವಕ್ಸೇನರು ಊರ ಮೆರವಣಿಗೆಯಲ್ಲಿ ಬಂದು ಬ್ರಹ್ಮೋತ್ಸವದ ಯಜ್ಞಕುಂಡಕ್ಕೆ ಬೇಕಾದ ಮೃತ್ ಸಂಗ್ರಹಣ ಕಾರ್ಯ ನಿರ್ವಹಿಸಿ ದಿಕ್ಪಾಲಕರನ್ನು ಆಹ್ವಾನಿಸಿದರು. ಬ್ರಹ್ಮೋತ್ಸವದ ಅಂಕುರಾರ್ಪಣೆ ಶಾಸ್ತ್ರೋಕ್ತವಾಗಿ ನಡೆಯಿತು. 2-6-2001 ರಂದು ಧ್ವಜಾರೋಹಣ ನಡೆಯಿತು.

ದಿನವೂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಉಭಯದೇವಿಯರೊಡನೆ ವಿವಿಧ ವಾಹನಗಳನ್ನೇರಿ ಭಕ್ತರಿಗೆ ದರ್ಶನ ನೀಡಿದರು. 6-6-2001 ರಂದು ಗರುಡೋತ್ಸವ ಹೆಚ್ಚಿನ ಸಂಖ್ಯೆಯನ್ನು ನಾರಾಯಣವನದತ್ತ ಸೆಳೆದು ಸುತ್ತ್ಯವಾಯಿತು. 9-6-2001 ರಂದು ರಥೋತ್ಸವ ನಡೆಯಿತು. 10-6-2001 ರಂದು ಚಕ್ರಸ್ನಾನದೊಡನೆ ಬ್ರಹ್ಮೋತ್ಸವಗಳು ಮುಗಿತಾಯ ಹೊಂದಿದವು. ಅಂದು ಸಂಜೆ ಧ್ವಜಾವರೋಹಣ ನಡೆಯಿತು.

ಬ್ರಹ್ಮೋತ್ಸವದ ಅಂಗವಾಗಿ ನಾರಾಯಣ ವನದ ಆಲಯದಲ್ಲಿ ಕುಂಕುಮಾರ್ಚನೆಯನ್ನು ಏರ್ಪಡಿಸಲಾಗಿದ್ದಿತು. ಅತ್ಯಂತ ಹೆಚ್ಚಿನ ಜನರು ಕುಂಕುಮಾರ್ಚನೆಯಲ್ಲಿ ಭಾಗವಹಿಸಿದ್ದರು.

ಕೀರ್ತನ ಸೇವೆ ಹರಿಕಥಾ ಸೇವೆಗಳೂ ಸ್ವಾಮಿಗೆ ಸಮರ್ಪಿತವಾದವು.

### ಅಪ್ಪಲಾಯಗುಂಟದ ಬ್ರಹ್ಮೋತ್ಸವ

ಅಪ್ಪಲಾಯಗುಂಟ ಒಂದು ಚಿಕ್ಕ ಗ್ರಾಮ. ಕಾರ್ವೇಟಿನಗರ ತಿರುಚಾನೂರು ದಾರಿಯಲ್ಲಿ ಸಿಗುವಂತಹದು. ಇಲ್ಲಿ ಪ್ರಸನ್ನ ವೆಂಕಟೇಶ್ವರ ಸ್ವಾಮಿ ಆಲಯವಿದೆ. ಉತ್ಸವ ಸಮಯಗಳಲ್ಲಿ ಸಾಕಷ್ಟು ಮಂದಿ ಭಕ್ತರು ಸಂದರ್ಶಿಸುವ ಸ್ಥಳವಿದು. ಇಲ್ಲಿ 1-6-2001 ರಿಂದ 10-6-2001 ರ ವರೆಗೆ ಯಶಸ್ವಿಯಾಗಿ ಬ್ರಹ್ಮೋತ್ಸವಗಳು ನಡೆದವು. ಅಪ್ಪಲಾಯಗುಂಟದ ಬ್ರಹ್ಮೋತ್ಸವಗಳು ನಾರಾಯಣವನಂ ಹಾಗೂ ಹೃಷೀಕೇಶ ದೇವಾಲಯಗಳ ಬ್ರಹ್ಮೋತ್ಸವಗಳ ಸಮಯಕ್ಕೆ ಸರಿಯಾಗಿ ನಡೆಯುವುದು ಒಂದು ವಿಶೇಷ. ಉತ್ತರಭಾಗದ ಹೃಷೀಕೇಶದಲ್ಲಿ ಸಾಮಾನ್ಯವಾಗಿ ಬೇಸಿಗೆಯ ನಡುವೆ ಎಂದರೆ ಮೇ - ಜೂನ್ ತಿಂಗಳುಗಳಲ್ಲಿ, ಹೆಚ್ಚಿನ ಯಾತ್ರಿಕರು ಬರಲು ಹೆಚ್ಚು ಅನುಕೂಲ ಆದಾಗ ನಡೆಯುವುದು ಸಾಧಾರಣವಾದದ್ದು. ಅದೇ ರೀತಿ ಈ ದಕ್ಷಿಣ ಭಾಗದಲ್ಲಿನ ಅಪ್ಪಲಾಯಗುಂಟದಲ್ಲಿಯೂ ನಾರಾಯಣದಲ್ಲಿಯೂ ಅದೇ ಮುಹೂರ್ತದಲ್ಲಿ ನಡೆಯುವ ವ್ಯವಸ್ಥೆ ಪ್ರಾಚೀನ ಕಾಲದಿಂದಲೂ ಪ್ರಚಲಿತವಾಗಿದೆ.

1-6-2001 ರಂದು ಸೇನಾಪತಿ ಉತ್ಸವ ನಡೆಯಿತು. 2-6-2001 ರಂದು ಬೆಳಗ್ಗೆ ಧ್ವಜಾರೋಹಣವಾಯಿತು. ದಿನವೂ ಬೆಳಗ್ಗೆ ಸಂಜೆಗಳಲ್ಲಿ ಸ್ವಾಮಿಯನ್ನು ವಿವಿಧ ವಾಹನಗಳಲ್ಲಿ ಊರಮೆರವಣಿಗೆಯಲ್ಲಿ ಕರೆತರಲಾಯಿತು. 8-6-2001 ರಂದು ಸಂಜೆ ಗರುಡವಾಹನದಲ್ಲಿ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿಯು ಹೊರಬಂದಾಗ ಗ್ರಾಮಸ್ಥರೆಲ್ಲರೂ ಬೀದಿವರಿದು ಸ್ವಾಮಿಯನ್ನು ಸ್ವಾಗತಿಸಿದರು. ರಥೋತ್ಸವವು 9-6-2001 ರಂದು ಅತ್ಯಂತ ಉತ್ಸಾಹಪೂರ್ಣವಾಗಿ ನಡೆಯಿತು. 10-6-2001 ರಂದು ಚಕ್ರಸ್ನಾನವಾಗಿ ಧ್ವಜಾವರೋಹಣವಾಯಿತು.

ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಸಂಗೀತ ಹರಿಕಥೆಗಳಲ್ಲಿಯೂ ಅತಿಹೆಚ್ಚಿನ ಜನ ಸೇರಿದ್ದರು.

### ತಿರುಮಲೆಯಲ್ಲಿ ಜ್ಯೇಷ್ಠಾಭಿಷೇಕ

ತಿರುಮಲೆಯಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಉತ್ಸವ ಮೂರ್ತಿಗಳಿಗೆ ಆಗಾಗ ನಡೆಯುವ ತಿರುಮಂಜನ ಕಾರ್ಯಕ್ರಮಗಳಿಂದಾಗಿ ಯಾವುದೇ ರೀತಿಯ ತೊಂದರೆಯೂ ಉಂಟಾಗಬಾರದೆಂಬ ಉದ್ದೇಶದಿಂದ ವಜ್ರಕವಚ, ಸುವರ್ಣ ಕವಚಗಳನ್ನು ತೊಡಿಸುವ ಕಾರ್ಯಕ್ರಮವಾದ ಮೂರು ದಿನಗಳ ಅಭಿಧೇಯಕ ಅಭಿಷೇಕ - ಜ್ಯೇಷ್ಠ ಮಾಸದಲ್ಲಿ ನಡೆಯುವುದರಿಂದ ಜ್ಯೇಷ್ಠಾಭಿಷೇಕ - ಈ ಬಾರಿ ಜೂನ್ 4,5,6 ರಂದು ನಡೆದು ಯಶಸ್ವಿಯಾಯಿತು.

4-6-2001 ರಂದು ಸೋಮವಾರ ವಜ್ರಕವಚ ಸಮರ್ಪಣೆ ಆಯಿತು. ಮಂಗಳವಾರ 5-6-2001 ರಂದು ಮುತ್ತಿನ ಅಂಗಿಯ ಸಮರ್ಪಣೆ ನಡೆಯಿತು. ಕಡೆಯದಿನ ಬುಧವಾರ 6-6-2001 ರಂದು ಸುವರ್ಣ ಕವಚ ಸಮರ್ಪಣೆ ನಡೆಯಿತು. ಚಿತ್ರಗಳನ್ನು ವರ್ಣದಲ್ಲಿ ಸಾದರಪಡಿಸಲಾಗಿದೆ.

### ತಿರುಮಲೆಯಲ್ಲಿ ಮುಖ್ಯಮಂತ್ರಿ

ಚಿತ್ತೂರು ಜಿಲ್ಲೆಗೆ ಆಗಮಿಸಿದ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು ಜೂನ್ 7 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ದರ್ಶಿಸಿ ಆರಾಧಿಸಿದರು.

ಆಲಯಕ್ಕೆ ಆಗಮಿಸಿದ ಮುಖ್ಯಮಂತ್ರಿಗಳನ್ನು ತಿ.ತಿ.ದೇ. ವಿಶೇಷ ಪ್ರಾಧಿಕಾರದ ಅಧ್ಯಕ್ಷರು ಶ್ರೀ ಎ.ವಿ.ಎಸ್. ರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ. ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಅವರುಗಳು ಸ್ವಾಗತಿಸಿದರು. ಸಂಪ್ರದಾಯದ ರೀತಿಯ



ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಒಂದು ವಾರ ಕಾಲ ಧರ್ಮಪ್ರಚಾರ ಪರಿಷತ್ ವತಿಯಿಂದ ಭಗವದ್ಗೀತೆಯ ಹರಿಕಥಾರೂಪ ಪ್ರಸ್ತಾರವಾಯಿತು. ಧರ್ಮಪ್ರಚಾರ ಪರಿಷತ್‌ನ ಕಾರ್ಯದರ್ಶಿಗಳಾದ ಪ್ರಾಚಾರ್ಯ ಡಾ|| ಎಚ್. ಎಸ್ ಬ್ರಹ್ಮಾನಂದ - ಅವರು ಒಂದು ವಾರಕಾಲ ಭಗವದ್ಗೀತೆಯನ್ನು ಹರಿಕಥಾರೂಪದಲ್ಲಿ ಶ್ರೋತೃಗಳ ಕರ್ಣಾನಂದವಾಗುವಂತೆ ಪ್ರಸ್ತುತಪಡಿಸಿದರು.

ಇಸ್ತಿಕಫಾಲ್ ಸ್ವಾಗತವನ್ನು ಆಲಯ ಪುರೋಹಿತರು ಬಯಸಿದರು.

ಆರಾಧನೆಯ ನಂತರ ಸ್ವಾಮಿಯ ತೀರ್ಥಪ್ರಸಾದಗಳನ್ನು ಸ್ವೀಕರಿಸಿದ ಮುಖ್ಯಮಂತ್ರಿಗಳು ಆಲಯದಿಂದ ಹೊರ ಬಂದು ರಥದ ಪಕ್ಕದಲ್ಲಿರುವ ಧ್ಯಾನ ಮಂದಿರದಲ್ಲಿ ಹತ್ತು ನಿಮಿಷ ಧ್ಯಾನ ಮಗ್ನರಾಗಿ ಕಾಲಕ್ಷೇಪ ಮಾಡಿದರು. ಅಲ್ಲಿನಡೆಸಬಹುದಾದ ಹಲವಾರು ಅಭಿವೃದ್ಧಿ ಕ್ರಮಗಳ ಬಗ್ಗೆ ಕಾರ್ಯನಿರ್ವಹಣಾಧಿಕಾರಿಗಳಿಗೆ ಸಲಹೆಗಳನ್ನು ನೀಡಿದರು. ತಿ.ತಿ.ದೇ.ಗಳ ಇತರ ಚಟುವಟಿಕೆಗಳನ್ನೂ, ಹೊಸದಾಗಿ ಆರಂಭಿಸಿರುವ ಶ್ರೀವಾರಿಸೇವೆ - ಸ್ವಯಂಸೇವೆ - ಯೋಜನೆಯ ವಿವರಗಳನ್ನೂ ಕೇಳಿ ತಿಳಿದರು.

ಶ್ರೀ ವೆಂಕಟೇಶ್ವರಸ್ವಾಮಿ ಸುಪ್ರಭಾತದ ಸಿ.ಡಿ.ಯನ್ನು ಮುಖ್ಯಮಂತ್ರಿಗಳು ಬಿಡುಗಡೆ ಮಾಡಿದರು. ತಿ.ತಿ.ದೇ. ಉದ್ಯಾನವನದಲ್ಲಿ ಕೆಲಸಮಾಡುತ್ತಿದ್ದ ಕನ್ನಡಿಗರಾದ ಶ್ರೀ ತಮ್ಮಣ್ಣ ಹಾಗೂ ಅವರ ಪುತ್ರ ಶ್ರೀನಿ ವಾಸ್ ಅವರುಗಳು (ತೋಟಗಾರಿಕೆಯ ತಜ್ಞರು, ಇಲಾಖೆಯಲ್ಲಿ ಸೂಪರಿಂಟೆಂಡೆಂಟ್) ಬರೆದ ''ತೋಟ ಪನುಲು'' ತೆಲುಗು ಪುಸ್ತಕವನ್ನು ಬಿಡುಗಡೆ ಮಾಡಿದರು.

ತಿರುಮಲೆಯಲ್ಲಿ ತಿ. ತಿ. ದೇವಸ್ಥಾನಗಳು ನಿರ್ಮಿಸಿರುವ ಎರಡನೇ ಸರತಿಯ ಸಾಲಿನ ಭವನ ಸಮುದಾಯವನ್ನು ಅವರು ಉದ್ಘಾಟನೆ ಮಾಡಿದರು. ಸುಮಾರು 20 ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಗಿರುವ ಈ ಸರದಿಯ ಸಾಲಿನ ಭವನದಲ್ಲಿ ಮೂವತ್ತಕ್ಕೂ ಹೆಚ್ಚು ಕಾಯುವ ಕೋಣೆಗಳಿದ್ದು ಒಟ್ಟಿಗೆ ಹದಿನೆಂಟರಿಂದ ಇಪ್ಪತ್ತು ಸಾವಿರ ಮಂದಿ ಕುಳಿತುಕೊಳ್ಳುವ ಅವಕಾಶವಿದೆ. ಇಲ್ಲಿ ಭಕ್ತರಿಗೆ ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಗಳನ್ನು ಕೂಡ ವ್ಯವಸ್ಥೆಗೊಳಿಸಲಾಗಿದೆ. ಇಲ್ಲಿನ ಒಟ್ಟು ಕೆಲಸ ಮುಗಿದಿದ್ದರೂ ಹಲವು - ಸಾರಿಸಿ ಗುಡಿಸುವ - ಮೇಲುಗೆಲಸ ಮುಗಿಯಬೇಕಿದೆ. ಅತಿ ತ್ವರೆಯಾಗಿ ಇದನ್ನು ಬಳಕೆಗೆ ತರಲು ತೀವ್ರ ಪ್ರಯತ್ನಗಳು ನಡೆಯುತ್ತಿವೆ. ಚಿತ್ರಗಳನ್ನು ವರ್ಣದಲ್ಲಿ ಸಾದರಪಡಿಸಲಾಗಿರುವುದನ್ನು ನೋಡಬಹುದು.






Edited and Published on behalf of T. T. Devasthanams by Dr. N. S. Rama Murthy, and printed at T.T.D. Press by I. Parvateeswara Rao, Manager, T. T. D. Press, Tirupati - 517 507.

# ತಿರುಮಲೆಯಲ್ಲಿ
## ಮಾಡಬೇಕಾದವು ಹಾಗೂ ಮಾಡಬಾರದವುಗಳು

### ಮಾಡಬೇಕಾದವು :

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ದರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ ''ಓಂ ನಮೋ ವೇಂಕಟೇಶಾಯ'' ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ, ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

### ಮಾಡಬಾರದವು :

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗುಲು ಮಾಡದೆ ಸರತಿಯಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.

★ ಆಲಯದೊಳಗೆ ಉಗುಳುವುದೇ ಮೊದಲಾದವುಗಳನ್ನು ಮಾಡದಿರಿ..